KA / BG-GPO/2515/WPP-47/2006-2008 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜನವರಿ ೫, ೨೦೦೬ (ಪುಷ್ಯ ೧೫, ಶಕ ವರ್ಷ ೧೯೨೭) | ಸಂಚಿಕೆ ೧ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ದಿನಾಂಕ: 01.04.2000ರಂದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ವಿವಿಧ ವೃಂದಗಳಲ್ಲಿ ಖಾಲಿ ಇರುವ ಹುದ್ದೆಗಳ ಪೈಕಿ ಶೇ.80ರಷ್ಟು ಖಾಲಿ ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ.

**ಓದಲಾಗಿದೆ :** ದಿನಾಂಕ: 09.09.2005ರಂದು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುತ ಸಮಿತಿ ಸಭೆಯ ನಡವಳಿ ಸಂಖ್ಯೆ: ಸಿಆಸುಇ 17 ಈಕಾಆ 2005 ದಿನಾಂಕ: 27.10.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ನಡವಳಿಗಳಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯ) ಖಾಲಿ ಇರುವ ಹುದ್ದೆಗಳನ್ನು ರದ್ದುಪಡಿಸುವ ಬಗ್ಗೆ/ ಖಾಲಿ ಹುದ್ದೆಗಳನ್ನು ರದ್ದುಪಡಿಸಿ ಅವುಗಳನ್ನು ತಾಂತ್ರಿಕ ಹುದ್ದೆಗಳಿಗೆ ಪರಿವರ್ತಿಸುವ ಬಗ್ಗೆ/ ಕೆಲವು ಹುದ್ದೆಗಳನ್ನು ಬಾಹ್ಯ ಮೂಲಗಳ ಮುಖಾಂತರ ಪೂರೈಸುವ ಬಗ್ಗೆ ಹಾಗೂ ಕೆಲವು ಖಾಲಿ ಹುದ್ದೆಗಳನ್ನು ಉಳಿಸಿಕೊಳ್ಳಲು ಅಧಿಕಾರಯುತ ಸಮಿತಿಯು ನಿರ್ಣಯಿಸಿರುತ್ತದೆ.

ಅಧಿಕಾರಿಯುತ ಸಮಿತಿಯ ನಿರ್ಣಯದಂತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯ)ಕ್ಕೆ ಸಂಬಂಧಿಸಿದಂತೆ, ದಿನಾಂಕ:01.04.2000ರಂದು ಖಾಲಿ ಇದ್ದ ಹುದ್ದೆಗಳನ್ನು ರದ್ದುಪಡಿಸುವ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 01 ಪಸ್ವೀರ 2005, ಬೆಂಗಳೂರು, ದಿನಾಂಕ: 7ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯದಲ್ಲಿ ದಿನಾಂಕ: 01.04.2000ರಂದು ಖಾಲಿ ಇದ್ದ ವಿವಿಧ ವೃಂದಗಳ ಹುದ್ದೆಗಳ ಬಗ್ಗೆ, ಈ ಆದೇಶದಲ್ಲಿ ಲಗತ್ತಿಸಿರುವ ಅನುಬಂಧ ಎ.ಬಿ.ಸಿ.ಡಿ. ಮತ್ತು ಇ ರಲ್ಲಿ ವಿವರಿಸಿದಂತೆ, ಈ ಕೆಳಕಗಿನಂತೆ ಕ್ರಮ ತೆಗೆದುಕೊಳ್ಳಲು, ಸರ್ಕಾರವು ಆದೇಶಿಸಿದೆ.

ಅನುಬಂಧ "ಎ"ರಲ್ಲಿ ಸೂಚಿಸಿರುವ ಹುದ್ದೆಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಅನುಬಂಧ "ಬಿ"ರಲ್ಲಿ ಗುರುತಿಸಲಾದ ಪ್ರಮಾಣದಲ್ಲಿ ಖಾಲಿ ಹುದ್ದೆಗಳನ್ನು ರದ್ದುಪಡಿಸಿ ಅದೇ ನಿಗದಿತ ಸಂಖ್ಯೆಯಲ್ಲಿ ಅವುಗಳನ್ನು ತಾಂತ್ರಿಕ ಹುದ್ದೆಗಳಿಗೆ ಪರಿವರ್ತಿಸಿಕೊಳ್ಳಲು ಸರ್ಕಾರದ ಅನುಮತಿ ನೀಡಲಾಗಿದೆ.

ಅನುಬಂಧ "ಸಿ"ರಲ್ಲಿ ಗುರುತಿಸಲಾದ ಖಾಲಿ ಹುದ್ದೆಗಳನ್ನು ಈಗಾಗಲೇ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ. ಈ ವೃಂದಗಳಲ್ಲಿ ಇನ್ನು ಮುಂದೆ ಖಾಲಿಯಾಗುವ ಹುದ್ದೆಗಳನ್ನು ಭರ್ತಿ ಮಾಡಬಾರದು ಹಾಗೂ ಈ ಹುದ್ದೆಗಳಲ್ಲಿ ಅಗತ್ಯವಿರುವ ಸೇವೆಗಳನ್ನು ಬಾಹ್ಯ ಮೂಲಗಳ ಮುಖಾಂತರ ಪೂರೈಸತಕ್ಕದ್ದು.

ಅನುಬಂಧ "ಡಿ"ರಲ್ಲಿ ನಮೂದಿಸಿರುವ ಹುದ್ದೆಗಳನ್ನು ರದ್ದುಪಡಿಸಲಾಗಿದೆ. ಈ ರದ್ದತಿಯು ಈ ಹುದ್ದೆಗಳು ಬಡ್ತಿ/ ನಿವೃತ್ತಿ/ ರಾಜೀನಾಮೆ/ ಮರಣ ಹಾಗೂ ಇತರೆ ಕಾರಂಗಳಿಂದ ಖಾಲಿಯಾದ ತಕ್ಷಣದಿಂದ ಅನ್ವಯವಾಗುತ್ತದೆ. ತದನಂತರ ಸದರಿ ಹುದ್ದೆಗಳಲ್ಲಿ ಅಗತ್ಯವಿರುವ ಸೇವೆಗಳನ್ನು ಬಾಹ್ಯ ಮೂಲಗಳ ಮುಖಾಂತರ ಮಾತ್ರ ಪೂರೈಸತಕ್ಕದ್ದು.

ಅನುಬಂಧ "ಇ"ರಲ್ಲಿ ಗುರುತಿಸಲಾದ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿಗಳು ಸಿಬ್ಬಂದಿಗಳ ಬಡ್ತಿ/ ನಿವೃತ್ತಿ/ ರಾಜೀನಾಮೆ/ ಮರಣ ಹಾಗೂ ಇತರೆ ಕಾರಣಗಳಿಂದ ಇನ್ನು ಮುಂದೆ ಖಾಲಿಯಾಗುವ ಹುದ್ದೆಗಳನ್ನು ರದ್ದುಪಡಿಸಲಾಗಿದೆ. ಯಾವ ಕಾರಣಕ್ಕೂ ಅವುಗಳನ್ನು ನೇಮಕ ಮಾಡಬಾರದು ಅಥವಾ ಬಾಹ್ಯ ಮೂಲಗಳ ಮುಖಾಂತರ ಪೂರೈಸಬಾರದು.

ಮೇಲ್ಕಂಡ ಹುದ್ದೆಗಳನ್ನು ಹೊರತುಪಡಿಸಿ ಇನ್ನುಳಿದ ಎಲ್ಲಾ ವೃಂದಗಳಲ್ಲಿ ಪ್ರಸ್ತುತ ಖಾಲಿ ಇರುವ ಹುದ್ದೆಗಳು ಇಲಾಖೆಯ ಕಾರ್ಯ ನಿರ್ವಹಣೆಗೆ ಅತ್ಯವಶ್ಯಕ ಹುದ್ದೆಗಳಾಗಿರುವುದರಿಂದ ಸದರಿ ಖಾಲಿ ಹುದ್ದೆಗಳನ್ನು ಉಳಿಸಿಕೊಳ್ಳಲು ಹಾಗೂ ಈ ಖಾಲಿ ಹುದ್ದೆಗಳನ್ನು ಶೇ.80ರಷ್ಟು ಖಾಲಿ ಹುದ್ದೆಗಳನ್ನು ರದ್ದುಪಡಿಸುವ ಪ್ರಕ್ರಿಯೆಯಿಂದ ವಿನಾಯಿತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪ್ರಭಾಕರ್ ಎಂ. ಶೇಟ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**Annexure-A**

| Sl. No. | Name of the post | Sanctioned posts | vacant posts | Total no. of posts to be abolished as per the decision of the empowered Committee |
|---|---|---|---|---|
| 1 | 2 | 3 | 4 | 5 |
| 1. | Purchase Officer/ Work Manager | 3 | 1 | 1 |
| 2. | Joint Director-Group-A Sr. scale (KHSDP) (SPC) | 3 | 1 | 1 |
| 3. | Technical Officer | 1 | 1 | 1 |
| 4. | Junior Physicists | 2 | 1 | 1 |
| 5. | Health Education Officer/ (1PP-9) Health Education Inspector/ Health Science Instructor. | 28 | 8 | 8 |
| 6. | Micro-Biologist | 20 | 6 | 1 |
| 7. | Asst. Leprosy Officer | 13 | 4 | 4 |
| 8. | Deputy Health Education Officer | 99 | 2 | 2 |
| 9. | Skilled Assistant | 60 | 14 | 14 |
| 10. | Asst. Statistical Officer | 29 | 3 | 2 |
| 11. | First Division Assistant | 2120 | 203 | 57 |
| 12. | Second Division Assistant | 1512 | 61 | 31 |
| 13. | Clerk cum Typist | 330 | 43 | 22 |
| 14. | Junior Stenographer | 79 | 10 | 10 |
| 15. | Senior Typist | 52 | 7 | 7 |
| 16. | Dental Hygienist | 9 | 4 | 4 |
| 17. | Artist | 1 | 1 | 1 |
| 18. | Physical Culture Instructor | 2 | 1 | 1 |
| 19. | Air Condition Operator | 2 | 1 | 1 |
| 20. | Pathological Assistant | 5 | 5 | 5 |
| 21. | Dialysis Therapist | 2 | 2 | 2 |
| 22. | Psychiatric Social Worker | 5 | 3 | 3 |
| 23. | Junior Compositor | 4 | 2 | 2 |
| 24. | Statistical Officer-1 (Deputation Post) | 2 | - | To Surrender one official working in this post to the parent Dept. Dept of Economics & Statistics is requested to take action to abolish 1 post earmarked for deputation in this behalf to Health & Family Welfare Dept. |

| 1 | 2 | 3 | 4 | 5 |
|---|---|---|---|---|
| 25. | Statistical Officer | 2 | - | - |
| 26. | Junior Health Assistant (male) | 5853 | 1259 | All the vacant posts in the cadre of Junior Health Assistant (male) were exempted from Abolition under 80% cut. The Dept was requested to take action to merge the para Medical Workers Cadre with the Cadre of Junior Health Asst. (Male). |
| 27. | Para Medical Worker | 938 | - | |
| | | **Total** | **181** | |

(Posts at Sl.No. 24 to 27 are excluded in the total indicated above)

**PRABHAKAR M. SHET**
Under Secretary to Government (I/c)
Health and Family Welfare Department.

**Annexure-B**

| Sl. No. | Name of the post | Sanctioned posts | Vacant posts | No of posts recommended for abolition | No of posts recommended for conversion into technical posts |
|---|---|---|---|---|---|
| 1 | 2 | 3 | 4 | 5 | 6 |
| 1. | Senior Chief Chemist & Public Analyst | 7 | 7 | 3 | 4 |
| 2. | Bio-Chemist | 1 | 1 | 1 | 1 |
| 3. | Lecturer in Health Education | 4 | 4 | 4 | 4 |
| 4. | Asst. Nutrition Officer | 9 | 9 | 9 | 9 |
| 5. | Asst. Deputy Director (HE & HS) | 1 | 1 | 1 | 1 |
| 6. | Dist. Nursing Superintendent (PH) | 89 | 68 | 31 | At present 37 vacant posts may be converted into technical posts 21 remaining posts may be converted into technical posts after the retirement of the officials working at present. |
| 7. | Asst. Director (Press) | 1 | 1 | 1 | 1 |
| 8. | Block Health Educator | 531 | 150 | 75 | 75 |
| 9. | Nursing Superintendent Grade-2 (PH) | 53 | 20 | 20 | 20 |
| 10. | Health Supervisor | 76 | 25 | 25 | 25 |
| 11. | Sr. Non medical Supervisor | 99 | 6 | 6 | 6 |
| 12. | Jr. Non Medical Supervisor | 177 | 27 | 27 | 27 |
| 13. | Physiotherapist (Leprosy) (Remaining vacancies occurring future may also be converte dinto technical posts after the retirement of officials working in these posts) | 33 | 6 | 6 | 6 |

| 1 | 2 | 3 | 4 | 5 | 6 |
|---|---|---|---|---|---|
| 14. | Artist cum photographer | 8 | 8 | 8 | 8 |
| 15. | Superintendent (Technical) | 1 | 1 | 1 | 1 |
| 16. | Printing Instructor | 1 | 1 | 1 | 1 |
| 17. | Weaving Instructor | 2 | 2 | 2 | 2 |
| 18. | Loom Mechanic | 3 | 3 | 3 | 3 |
| 19. | Refrigerator Mechanic | 3 | 1 | 1 | 1 |
| 20. | Research Assistant | 1 | 1 | 1 | 1 |
| 21. | Needle Work Teacher | 1 | 1 | 1 | 1 |
| 22. | Equipment Technician Group-C (KHSBP) | 187 | 187 | 187 | 187 |
| 23. | Compositor | 1 | 1 | 1 | 1 |
| 24. | Junior Computer | 1 | 1 | 1 | 1 |
| 25. | Supervisor / oversier (offset press) | 1 | 1 | 1 | 1 |
| 26. | Process Operator | 1 | 1 | 1 | 1 |
| 27. | Offset Printer (Plate Maker) | | | | |
| 28. | Binder | 2 | 1 | 1 | 1 |
| 29. | Asst. Binder | 8 | 1 | 1 | 1 |
| 30. | Second Divisin Compositor (Offset Press) | 1 | 1 | 1 | 1 |
| 31. | Dark Room Assistant Cook | 60<br>60 | 57<br>60 | 57<br>60 | 57<br>60 |
| 32. | Wireless Operator | 90 | 90 | 90 | 90 |
| | **Total** | | | **633** | **662** |

**PRABHAKAR M. SHET**
Under Secretary to Government (I/c)
Health and Family Welfare Department.

**Annexure-C**

| Sl. No. | Name of the post | Sanctioned posts | Vacant posts | Decision of the Empowered Committee | | |
|---|---|---|---|---|---|---|
| 1 | 2 | 3 | 4 | 5 | 6 | 7 |
| | | | | a | b | c |
| 1. | Service Engineer | 14 | 7 | To abolish 7 vacant posts at present | Vacancies occurring in future to be ablished | The entire activity in future in these posts to be out sourced |
| 2. | Junior Drivers | 1473 | 648 | To abolish 275 vacant posts of Jr. Drivers. The remaining 373 posts are filled up with contract Drivers. | -"- | -"- |
| 3. | Stenographer | 97 | 7 | To abolish 7 vacant posts | -"- | -"- |
| 4. | Typist | 277 | 48 | To abolish 48 vacant posts | -"- | -"- |
| 5. | Orthopedic Technician | 2 | 2 | To abolish 2 vacant posts | -"- | -"- |
| 6. | Speech Pathologist | 1 | 1 | To abolish 1 vacant posts | -"- | -"- |

| 1 | 2 | 3 | 4 | 5 | 6 | 7 |
|---|---|---|---|---|---|---|
| 7. | Speech Therapist | 1 | 1 | To abolish 1 vacant posts | -"- | -"- |
| 8. | Wireman | 1 | 1 | To abolish 1 vacant posts | -"- | -"- |
| 9. | Leather Worker | 2 | 1 | To abolish 1 vacant posts | Vacancies occurring in future to be abolished | -"- |
| 10. | Plumber | 1 | 1 | To abolish 1 vacant posts | Does not arise | -"- |
| 11. | Group-D | 14943 | 2532 | To abolish 2032 vacant posts | Vacancies occurring in future to be abolished and activity to be outsourced in future. | -"- |
| (Remaining 500 vacant posts every year in the Cadre of Group-D posts should be kept as reserved vacant posts for providing compassionate appointments) | | | | | | |
| 12. | Ward Boy | 1 | 1 | To abolish 1 vacant posts | Does not arise | -"- |
| | | | | **Total 2377** | | |

**PRABHAKAR M. SHET**
Under Secretary to Government (I/c)
Health and Family Welfare Department.

**Annexure-D**

| Sl. No. | Name of the post | Sanctioned posts | Vacant posts | No of posts to be abolished after the retirement/ death/ resignation of the officials, and thereafter to outsource the activity required in the posts |
|---|---|---|---|---|
| 1 | 2 | 3 | 4 | 5 |
| 1. | Editor | 1 | - | 1 |
| 2. | Technical Officer (Exhibition) | 1 | - | 1 |
| 3. | Projectionist (FW) | 19 | - | 19 |
| 4. | Modeler | 4 | - | 4 |
| 5. | Optical mechanic | 1 | - | 1 |
| 6. | Superior Field Worker | 4 | - | 4 |
| 7. | Carpenter | 1 | - | 1 |
| 8. | Pump Mechanic | 1 | - | 1 |

**PRABHAKAR M. SHET**
Under Secretary to Government (I/c)
Health and Family Welfare Department.

**Annexure-E**

| Sl. No. | Name of the post | Sanctioned posts | Vacant posts | No of posts to be abolished after the retirement/ Death / Resignation of the Official (as per the decision of the Empowered Committee |
|---|---|---|---|---|
| 1 | 2 | 3 | 4 | 5 |
| 1. | Junior Engineer (Mechanical) (Auto Clave mechanic) | 1 | - | 1 |

| 1 | 2 | 3 | 4 | 5 |
|---|---|---|---|---|
| 2. | Scientific Assistant | 4 | - | 4 |
| 3. | Sub-Editor | 2 | - | 2 |
| 4. | Home Science Asst. | 1 | - | 1 |
| 5. | Asst. Process Operator | 1 | - | 1 |
| 6. | Asst. Offset plate grinder | 1 | - | 1 |
| 7. | Machnie Binder | 1 | - | 1 |
| 8. | Senior Binder | 1 | - | 1 |
| 9. | Senior Proof Examiner | 1 | - | 1 |
| 10. | Junior Proof Examiner | 2 | - | 2 |
| | | | **Total** | **15** |

**PRABHAKAR M. SHET**
PR-1635
Under Secretary to Government (I/c)
Health and Family Welfare Department.

## ಲೋಕೋಪಯೋಗಿ ಸಚಿವಾಲಯ

**ವಿಷಯ :** ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :** 1. ಮುಇಂ:ಸಂಕದ:ರಶಾ:ಸಇಂ4:ಕೆಆರ್. ನಗರ:1:2005-06, ದಿನಾಂಕ: 17.11.2005 ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರ ಪತ್ರ.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರ ಮೈಸೂರು ಜಿಲ್ಲೆ, ಕೆ.ಆರ್.ಪೇಟೆ ತಾಲ್ಲೂಕಿನ ಈ ಕೆಳಕಂಡ ಎರಡು ಗ್ರಾಮೀಣ ರಸ್ತೆಗಳನ್ನು ಇಲ್ಲಿನ ವಾಹನ ದಟ್ಟಣೆ ಹೆಚ್ಚಾಗಿರುವುದರಿಂದ ಹಾಗೂ ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

1) ರಾಮನಾಥಪುರ- ತೆರಕಣಾಂಬಿ ರಸ್ತೆಯಿಂದ ಪಶುಪತಿಕೊಪ್ಪಲು ಮಾರ್ಗ, ಪಶುಪತಿ ಗ್ರಾಮದ ರಸ್ತೆ- 3.00 ಕಿ.ಮೀ.
2) ರಾಮನಾಥಪುರ- ತೆರಕಣಾಂಬಿ ರಸ್ತೆಯಿಂದ ರಾಮಲಿಂಗೇಶ್ವರ ದೇವಸ್ಥಾನದ ರಸ್ತೆ -3.75 ಕಿ.ಮೀ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 100 ಸಿಆರ್ಎಂ 2005, ಬೆಂಗಳೂರು, ದಿನಾಂಕ: 18ನೇ ನವೆಂಬರ್, 2005**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಮೈಸೂರು ಜಿಲ್ಲೆ, ಕೆ.ಆರ್.ಪೇಟೆ ತಾಲ್ಲೂಕಿನ ಈ ಕೆಳಕಂಡ ಎರಡು ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

1) ರಾಮನಾಥಪುರ- ತೆರಕಣಾಂಬಿ ರಸ್ತೆಯಿಂದ ಪಶುಪತಿಕೊಪ್ಪಲು ಮಾರ್ಗ, ಪಶುಪತಿ ಗ್ರಾಮದ ರಸ್ತೆ- 3.00 ಕಿ.ಮೀ.
2) ರಾಮನಾಥಪುರ- ತೆರಕಣಾಂಬಿ ರಸ್ತೆಯಿಂದ ರಾಮಲಿಂಗೇಶ್ವರ ದೇವಸ್ಥಾನದ ರಸ್ತೆ -3.75 ಕಿ.ಮೀ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶೇಖ್ ಅಬ್ದುಲ್ ವಾಜಿದ್**
ಪಿ.ಆರ್.1636
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸಂಪರ್ಕ).

**ವಿಷಯ :** ಶ್ರೀ ಹೆಚ್.ಕೆ. ರಂಗನಾಥ, ಪದವೀಧರ ಇಂಜಿನಿಯರ್ (ಎಂ.ಆರ್.ಇ.) ಇವರ ಸೇವೆಯನ್ನು ಸಕ್ರಮಗೊಳಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 17 ಪಿಡಬ್ಲ್ಯೂಸಿ 2005, ಬೆಂಗಳೂರು, ದಿನಾಂಕ: 16ನೇ ನವೆಂಬರ್, 2005**

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13: ಎಸ್ಎಲ್ಸಿ:94 ದಿನಾಂಕ: 29.09.1994.
2. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ 357 ಪಿಡಬ್ಲ್ಯೂಸಿ 90 ದಿನಾಂಕ: 02.12.1994.
3. ಸರ್ಕಾರದ ಪತ್ರ ಸಂಖ್ಯೆ: ಪಿಡಬ್ಲ್ಯೂಡಿ 201 ಪಿಡಬ್ಲ್ಯೂಸಿ 95, ದಿನಾಂಕ: 02.07.1994, 01.09.1995 ಮತ್ತು 13.09.1995.
4. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದ) ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬಿಎಸ್:30: ಇಎಸ್ಎಂ: ದಿನೌಸೇ: 2005-06, ದಿನಾಂಕ: 06.07.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 738:90, 1038:90 ಮತ್ತು 297:91 ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ: 01.07.1984ರ ನಂತರ ಹಾಗೂ 15.10.1992ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮಸಂಖ್ಯೆ: (1)ರಲ್ಲಿ ಓದಲಾದ ಸಿ.ಆ.ಸು.ಇಲಾಖೆಯ ಆದೇಶಾನುಸಾರ ಕ್ರಮಸಂಖ್ಯೆ: (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ 01.07.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ

ಇಂಜಿನಿಯರ್‌ರನ್ನು ದಿನಾಂಕ: 29.09.94ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ: 29.09.94ರ ಆದೇಶದಲ್ಲಿನ ಕಂಡಿಕೆ 6 ಮತ್ತು 7ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮಸಂಖ್ಯೆ: (3)ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದ), ಬೆಂಗಳೂರು ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿ.ಆ.ಸು.ಇಲಾಖೆಯ ಸಂಖ್ಯೆ: ಡಿಪಿಎಆರ್: 13:ಎಸ್‌ಎಲ್‌ಸಿ 94 ದಿನಾಂಕ: 29.9.94 ಹಾಗೂ ಪಿಡಬ್ಲ್ಯೂಡಿ 357 ಪಿಡಬ್ಲ್ಯೂಸಿ 90 ದಿನಾಂಕ: 02.12.94ರ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ ಕೆಲಸ ಮಾಡುತ್ತಿರುವ ಶ್ರೀ ಹೆಚ್.ಕೆ. ರಂಗನಾಥ, ಪದವೀಧರ ಇಂಜಿನಿಯರ್‌ರವನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಯ ದಿನಾಂಕ: 01.07.84ರ ನಂತರ ಹಾಗೂ 15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿ.ಆ.ಸು.ಇ:13:ಎಸ್‌ಎಲ್‌ಸಿ:94 ದಿನಾಂಕ: 29.09.94 ಮತ್ತು ಸಿಆಸುಇ 17 ಸೇಸ್ಥಅ 94 ದಿನಾಂಕ: 20.10.94ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಅಂದರೆ 31ನೇ ಜನವರಿ 2003ರಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಕ್ರ. ಸಂ. | ಹೆಸರು ಶ್ರೀಯುತರು | ದಿನಗೂಲಿಗೆ ಸೇರಿದ ದಿನಾಂಕ | ಬಿ.ಇ. ಪದವಿ ಪಾಸು ಮಾಡಿದ ದಿನಾಂಕ | 10 ವರ್ಷ ಸೇವೆ ಪೂರೈಸುವ ದಿನಾಂಕ | ಕ್ರಮಬದ್ಧಗೊಳ್ಳುವ ದಿನಾಂಕ | ಕಾರ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|---|
| 1. | ಹೆಚ್.ಕೆ. ರಂಗನಾಥ, ಪದವೀಧರ ಇಂಜಿನಿಯರ್. | 11.10.88 | ಜನವರಿ 1993 | 11.10.98 ಜನವರಿ 2003 | 31.01.2003 | ಲೋಕೋಪಯೋಗಿ ಉಪ ವಿಭಾಗ, ಗುಬ್ಬಿ. |

2. ಸದರಿ ನೌಕರರು ಸೇವೆಯಲ್ಲಿ ಸಕ್ರಮಗೊಂಡ ದಿನಾಂಕದಿಂದ ಅಂದರೆ ದಿನಾಂಕ:31.01.2003ರಿಂದ ಜಾರಿಗೆ ಬರುವಂತೆ ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನವನ್ನು ಪಡೆಯಲು ಅರ್ಹರಾಗಿರುತ್ತಾರೆ.

3. ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದ), ಬೆಂಗಳೂರು ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದ), ಬೆಂಗಳೂರು ಇವರಲ್ಲಿ ಕಾರ್ಯವರದಿ ಮಾಡಿಕೊಳ್ಳುವುದು.

4. ಈ ಆದೇಶವನ್ನು ಸಿಆಸುಇ: 13: ಎಸ್‌ಎಲ್‌ಸಿ: 94 ದಿನಾಂಕ: 29.09.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟರಸಪ್ಪ**

ಪಿ.ಆರ್.1637

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಚಾಮರಾಜನಗರ- ರಾಮಸಮುದ್ರ ಸ್ಥಳೀಯ ಯೋಜನಾ ಪ್ರದೇಶದ ಮಾಸ್ಟರ್ ಪ್ಲಾನ್ ಪರಿಷ್ಕೃತ-1ಗೆ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ದಿನಾಂಕ: 20.12.01ರ ಅಧಿಸೂಚನೆ ಸಂಖ್ಯೆ: ನಅಇ 434 ಮೈಅಪ್ರಾ 2001.
2. ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಚಾಮರಾಜನಗರ ಇವರ ಪತ್ರ ಸಂಖ್ಯೆ: ಚಾರಾನಪ್ರಾ:ತಾಂತ್ರಿಕ: ವ್ಯಾಅಯೋ(ತಾ): 223:2004-05, ದಿನಾಂಕ: 05.03.05.
3. ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಕಡತ ಸಂಖ್ಯೆ: ನಯೋ(25): ಉನಿII: ಚಾರಾ: ವ್ಯಾಅಯೋ: 2005:07, ದಿನಾಂಕ: 16.04.05.

**ಪ್ರಸ್ತಾವನೆ:**

ಚಾಮರಾಜನಗರ- ರಾಮಸಮುದ್ರ ಸ್ಥಳೀಯ ಯೋಜನಾ ಪ್ರದೇಶದ ಸ್ಥೂಲಾಭಿವೃದ್ಧಿ ಯೋಜನೆಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಪ್ರಕರಣ 13(3)ರನ್ವಯ ಅಂತಿಮ ಅನುಮೋದನೆ ನೀಡಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಚಾಮರಾಜನಗರ ಇವರ ಚಾಮರಾಜನಗರ ಸ್ಥಳೀಯ ಯೋಜನಾ ಪ್ರದೇಶದ ಮಾಸ್ಟರ್ ಪ್ಲಾನ್ ಪರಿಷ್ಕೃತ-1 ಅನ್ನು ತಯಾರಿಸಿ ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ನಿರ್ದೇಸಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸಲ್ಲಿಸಿರುತ್ತಾರೆ.

ಚಾಮರಾಜನಗರ ಜನಸಂಖ್ಯೆಯು 2001ರಲ್ಲಿ 60, 558 ಇದ್ದು, 2021ನೇ ಇಸವಿಗೆ 1,25,000 ಆಗಬಹುದೆಂದು ಅಂದಾಜಿಸಿ ಮಾಸ್ಟರ್ ಪ್ಲಾನ್ ಪರಿಷ್ಕೃತ-1 ನ್ನು ಸಿದ್ದಪಡಿಸಲಾಗಿದೆ. ವಿಸ್ತರಿತ ಸ್ಥಳೀಯ ಯೋಜನಾ ಪ್ರದೇಶದ 12,099 ಹೆಕ್ಟೇರ್ ವಿಸ್ತೀರ್ಣದಲ್ಲಿ 1517.40 ಹೆಕ್ಟೇರ್ ಪ್ರದೇಶವನ್ನು ನಗರೀಕರಣ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ನಗರದ ಯೋಜಿತ ಬೆಳವಣಿಗೆಗಾಗಿ ಪ್ರಸ್ತಾಪಿಸಿರುವ ಒಟ್ಟು 1517.40 ಹೆಕ್ಟೇರ್ ವಿಸ್ತೀರ್ಣದ ಪ್ರದೇಶದಲ್ಲಿ ವಸತಿಗೆ ಶೇ.57.36, ವಾಣಿಜ್ಯಕ್ಕೆ ಶೇ.4.37, ಕೈಗಾರಿಕೆಗೆ ಶೇ.4.76, ಸಾರ್ವಜನಿಕ: ಅರೆ ಸಾರ್ವಜನಿಕಕ್ಕೆ ಶೇ.6.40, ಉದ್ಯಾನವನ ಮತ್ತ ಬಯಲು ಜಾಗಕ್ಕೆ ಶೇ.6.55, ಸಾರಿಗೆ ಮತ್ತು ಸಂಪರ್ಕಕ್ಕಾಗಿ ಶೇ.19.90 ಮತ್ತು ನಾಗರೀಕ ಸೌಲಭ್ಯಕ್ಕಾಗಿ ಶೇ.0.14 ವಿಸ್ತೀರ್ಣವನ್ನು ನಿಗದಿಪಡಿಸಲಾಗಿದೆ.

ಚಾಮರಾಜನಗರ- ರಾಮಸಮುದ್ರ ಸ್ಥಳೀಯ ಯೋಜನಾ ಪ್ರದೇಶಕ್ಕೆ ಮಾಸ್ಟರ್ ಪ್ಲಾನ್ ಪರಿಷ್ಕೃತ-1 ಅನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ (ತಿದ್ದುಪಡಿ) ಕಾಯ್ದೆ, 2004ರ ಕಲಂ 13-ಡಿ ಮತ್ತು 13(1) ರನ್ವಯ ತಾತ್ಕಾಲಿಕ ಅನುಮೋದನೆ ನೀಡುವ ಬಗ್ಗೆ ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ಓದಲಾದ (3)ರಲ್ಲಿ ಶಿಫಾರಸ್ಸು ಮಾಡಲಾಗಿದೆ.

1) ಯೋಜನೆಯ ಗಣಕೀಕೃತ ಕೆಲವು ನಕ್ಷೆಗಳಲ್ಲಿ ಕೆಲವೆಡೆ ಅನಾವಶ್ಯಕ ಗೆರೆಗಳು (ಕಾರ್ಟೋಗ್ರಾಫಿಕ್ ಎರರ್ಸ್) ಮೂಡಿದ್ದು, ಅವುಗಳನ್ನು ಯೋಜನೆಯನ್ನು ಅಂತಿಮ ಅನುಮೋದನೆಗೆ ಸಲ್ಲಿಸುವಾಗ ತೆಗೆದು ಹಾಕತಕ್ಕದ್ದು.
2) ಸದರಿ ಯೋಜನೆಯನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ (ತಿದ್ದುಪಡಿ) ಕಾಯ್ದೆ, 2004ರ ಪ್ರಕರಣ 13-ಸಿ ರನ್ವಯ "ಮಾಸ್ಟರ್ ಪ್ಲಾನ್ (ಮಹಾ ಯೋಜನೆ) ಪರಿಷ್ಕೃತ-1 ತಾತ್ಕಾಲಿಕ" ಎಂದು ಪರಿಗಣಿಸತಕ್ಕದ್ದು.

**ಸರ್ಕಾರದ ಆದೇಶ ಸಂಖ್ಯೆ: ನಅಇ 367 ಮೈಅಪ್ರಾ 2005, ಬೆಂಗಳೂರು, ದಿನಾಂಕ: 22ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ನಿಬಂಧನೆಗಳಿಗೊಳಪಟ್ಟು ಚಾಮರಾಜನಗರ ಜಿಲ್ಲೆ, ಚಾಮರಾಜನಗರ-ರಾಮಸಮುದ್ರ ಸ್ಥಳೀಯ ಯೋಜನಾ ಪ್ರದೇಶದ ಪರಿಷ್ಕೃತ-1 ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ (ತಿದ್ದುಪಡಿ) ಕಾಯ್ದೆ, 2004 ರ ಪ್ರಕರಣ 13-ಡಿ ಮತ್ತು 13(1) ರನ್ವಯ ತಾತ್ಕಾಲಿಕ ಅನುಮೋದನೆ ನೀಡಿದೆ.

ಮಾಸ್ಟರ್ ಪ್ಲಾನ್ ಪರಿಷ್ಕೃತ-1 ಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಮತ್ತು ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್.ವೈ. ಸಾಗರ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್.1638

## ಆರ್ಥಿಕ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಮಟ್ಟದ ಮೌಲ್ಯವರ್ಧಿತ ತೆರಿಗೆ ಸಲಹಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 142 ಸಿಎಸ್ಇ 2005, ದಿನಾಂಕ: 09.05.2005.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದ ಉಪ ಮುಖ್ಯಮಂತ್ರಿ ಹಾಗೂ ಹಣಕಾಸು ಸಚಿವರ ಅಧ್ಯಕ್ಷತೆಯಲ್ಲಿ ಕರ್ನಾಟಕ ರಾಜ್ಯ ಮಟ್ಟದ ಮೌಲ್ಯವರ್ಧಿತ ತೆರಿಗೆ ಸಲಹಾ ಸಮಿತಿಯನ್ನು ಉಲ್ಲೇಖಿತ ಆದೇಶದಲ್ಲಿ ರಚಿಸಲಾಗಿತ್ತು. ಈಗ ಹಣಕಾಸು ಖಾತೆಯನ್ನು ಬೃಹತ್ ಮತ್ತು ಮಧ್ಯಮ ಕೈಗಾರಿಕೆ, ಸಣ್ಣ ಕೈಗಾರಿಕೆ ಮತ್ತು ಮೂಲ ಸೌಲಭ್ಯ ಸಚಿವರಿಗೆ ಹಂಚಿಕೆಯಾಗಿರುವುದರಿಂದ, ಕರ್ನಾಟಕ ರಾಜ್ಯ ಮಟ್ಟದ ಮೌಲ್ಯವರ್ಧಿತ ತೆರಿಗೆ ಸಲಹಾ ಸಮಿತಿಯನ್ನು ಬೃಹತ್ ಮತ್ತು ಮಧ್ಯಮ ಕೈಗಾರಿಕೆ, ಸಣ್ಣ ಕೈಗಾರಿಕೆ ಮತ್ತು ಮೂಲ ಸೌಲಭ್ಯ ಹಾಗೂ ಹಣಕಾಸು ಸಚಿವರ ಅಧ್ಯಕ್ಷತೆಯಲ್ಲಿ ರಚಿಸುವ ಅಗತ್ಯವಿದೆ. ಆದುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 142 ಸಿಎಸ್ಇ 05, ಬೆಂಗಳೂರು, ದಿನಾಂಕ: 23ನೇ ನವೆಂಬರ್ 2005**

ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 142 ಸಿಎಸ್ಎಲ್ 2005, ದಿನಾಂಕ: 09.05.2005ರಲ್ಲಿ ರಚಿಸಲಾಗಿದ್ದ ರಾಜ್ಯ ಮಟ್ಟದ ಮೌಲ್ಯವರ್ಧಿತ ತೆರಿಗೆ ಸಲಹಾ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಬೃಹತ್ ಮತ್ತು ಮಧ್ಯಮ ಕೈಗಾರಿಕೆ, ಸಣ್ಣ ಕೈಗಾರಿಕೆ ಮತ್ತು ಮೂಲ ಸೌಲಭ್ಯ ಹಾಗೂ ಹಣಕಾಸು ಸಚಿವರ ಅಧ್ಯಕ್ಷತೆಯಲ್ಲಿ ಪುನರ್ ರಚಿಸಲಾಗಿದೆ.

ಉಲ್ಲೇಖಿತ ದಿನಾಂಕ: 09.05.2005ರ ಆದೇಶದಲ್ಲಿ ಒಳಗೊಂಡ, ಸದಸ್ಯರುಗಳ ಹೆಸರುಗಳೂ ಸೇರಿದಂತೆ, ಇತರ ಅಂಶಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಜಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ವಾ.ತೆ-2).

ಪಿ.ಆರ್.1639

**ವಿಷಯ :** ನಿವೃತ್ತಿ ವೇತನದಾರರಿಗೆ ಮತ್ತು ಕುಟುಂಬ ನಿವೃತ್ತಿ ವೇತನದಾರರಿಗೆ ತುಟ್ಟಿಭತ್ಯೆ ದರಗಳ ಪರಿಷ್ಕರಣೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ: ಆಇ (ವಿಶೇಷ) 10 ಪಿಇಟಿ 2005, ದಿನಾಂಕ: 25.05.2005.

**ಆದೇಶ ಸಂಖ್ಯೆ: ಆಇ (ವಿಶೇಷ) 14 ಪಿಇಟಿ 2005, ಬೆಂಗಳೂರು, ದಿನಾಂಕ: 15ನೇ ನವೆಂಬರ್, 2005**

ರಾಜ್ಯದ ಸಂಚಿತ ನಿಧಿಯಿಂದ ನಿವೃತ್ತಿ ವೇತನ ಮತ್ತು ಕುಟುಂಬ ನಿವೃತ್ತಿ ವೇತನವನ್ನು ಪಡೆಯುತ್ತಿರುವಂತಹ ರಾಜ್ಯ ಸರ್ಕಾರದ ನಿವೃತ್ತಿ ವೇತನದಾರರಿಗೆ ಮತ್ತು ಕುಟುಂಬ ನಿವೃತ್ತಿ ವೇತನದಾರರಿಗೆ ಮತ್ತು ಅನುದಾನಿತ ಶಿಕ್ಷಣ ಸಂಸ್ಥೆಗಳ ನಿವೃತ್ತಿ ವೇತನದಾರರು ಮತ್ತು ಕುಟುಂಬ ನಿವೃತ್ತಿ ವೇತನದಾರರಿಗೆ ಮೂಲ ನಿವೃತ್ತಿ ವೇತನ/ ಕುಟುಂಬ ನಿವೃತ್ತಿ ವೇತನದ ಶೇಕಡ 67 ರಷ್ಟಿರುವ ತುಟ್ಟಿಭತ್ಯೆ ದರವನ್ನು ಶೇಕಡ 71ಕ್ಕೆ ದಿನಾಂಕ: 01.07.2005ರಿಂದ ಜಾರಿಗೆ ಬರುವಂತೆ ಹೆಚ್ಚಿಸಿ ಮಂಜೂರು ಮಾಡಲಾಗಿದೆ.

2. ಈ ಆದೇಶದಿಂದಾಗಿ ಪಾವತಿಸಬೇಕಾದ ತುಟ್ಟಿಭತ್ಯೆಯ ಮೊತ್ತದಲ್ಲಿ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಶಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಶಗಳನ್ನು ಕಡೆಗಣಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎನ್. ಈರೇಗೌಡ**
ವಿಶೇಷಾಧಿಕಾರಿ (ವಿಶ್ರಾಂತಿ ವೇತನ) (ಪ್ರಭಾರ),
ಆರ್ಥಿಕ ಇಲಾಖೆ.

ಪಿ.ಆರ್.1640

## ಶಿಕ್ಷಣ ಸಚಿವಾಲಯ

**ವಿಷಯ :** 2005-06ನೇ ಶೈಕ್ಷಣಿಕ ಸಾಲಿಗೆ ಚಿಕ್ಕಬಳ್ಳಾಪುರದ ಶ್ರೀ ಜಗದ್ಗುರು ಬಾಲಗಂಗಾಧರನಾಥ ಸ್ವಾಮೀಜಿ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆ.

**ಓದಲಾಗಿದೆ :**
1. ದಿನಾಂಕ: 27.12.2003ರ ಸಂ. ಇಡಿ 389 ಯುಆರ್‌ಸಿ 2003 ಸರ್ಕಾರಿ ಆದೇಶ.
2. ದಿನಾಂಕ: 04.08.2005 ಸಂ. F.SRO/ NCTE/ B.P.Ed/2005-06/2183ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿನಾಂಕ: 18.08.2005ರ ಸಂ.ಪಿಡಿ/ 548/2005-06ರ ಚಿಕ್ಕಬಳ್ಳಾಪುರದ ಶ್ರೀ ಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್‌ನ ಕಾರ್ಯದರ್ಶಿಯವರ ಪತ್ರ.
4. ದಿನಾಂಕ: 24.11.2003ರ ಸಂ. ಎಸಿಎ-3/ ಸಪಸ/ ಹೊಕಾಪ್ರ/ 2003-04ರ ಕುಲಸಚಿವರು, ಬೆಂಗಳೂರು ವಿಶ್ವವಿದ್ಯಾಲಯ ಇವರ ಪತ್ರ.

**ಪೀಠಿಕೆ**

1) ಸರ್ಕಾರಿ/ ವಿಶ್ವವಿದ್ಯಾಲಯ/ ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ ಬಿ.ಪಿ.ಎಡ್ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಚಿಕ್ಕಬಳ್ಳಾಪುರದ ಶ್ರೀ ಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್‌ನ ಶ್ರೀ ಜಗದ್ಗುರು ಬಾಲಗಂಗಾಧರನಾಥ ಸ್ವಾಮೀಜಿ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕಾಲೇಜಿಗೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ: 04.08.2005ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಪಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ಪತ್ರದಲ್ಲಿ ಮೇಲ್ಕಂಡ ಟ್ರಸ್ಟಿನ ಕಾರ್ಯದರ್ಶಿಯವರು ಸದರಿ ಕಾಲೇಜಿನ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಉಲ್ಲೇಖ (4)ರಲ್ಲಿರುವ ಪತ್ರದಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕುಲಸಚಿವರು ಈ ಕಾಲೇಜಿನ ಬಿ.ಪಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಸಂಯೋಜನೆಯನ್ನು ನೀಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 283 ಯುಆರ್‌ಸಿ 2005, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್, 2005**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್ ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಚಿಕ್ಕಬಳ್ಳಾಪುರದ ಶ್ರೀ ಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್‌ನ ಶ್ರೀ ಜಗದ್ಗುರು ಬಾಲಗಂಗಾಧರನಾಥ ಸ್ವಾಮೀಜಿ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್. ಕಾಲೇಜಿಗೆ 2005-2006ನೇ ಶೈಕ್ಷಣಿಕ ಸಾಲಿಗೆ ಅನುವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

ಪಿ.ಆರ್.1756

## FINANCE SECRETARIAT

**Sub:** Dearness Allwance to pensioners/ Family Pensioners-revision of rates.
**Read:** G.O. No. FD (Spl) 10 PET 2005, Dated: 25.05.2005

**Order No. FD (SPL) 14 PET 2005, Bangalore, Dated: 15th November, 2005**

Government are pleased to snaction increase in the rates of Dearness Allowance from existing 67% to 71% of basic pension/ family pension to the State Government Pensioners/ Family Pensioners and the pensioners and family pensioners of the Aided Educational Institutions whose pension/ family pension is paid out of the Consolidated Fund of the State, with effect from 01.07.2005.

2. The payment on account of the increase in Dearness Allowance as per these orders involving fractions of 50 paise and above shall be rounded off to the next rupee and fractions less than 50 paise shall be ignored.

By Order and in the name of the Governor of Karnataka,
**M.N. EREGOWDA**
Special Officer (Pension) (I/c)
Finance Department.

PR-1641

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ :** 2005ರ ನವೆಂಬರ್ ಮಾಹೆಯಲ್ಲಿ "ಗುಲ್ಬರ್ಗಾ ಜಿಲ್ಲೆಯ ಅಧ್ಯಯನ" ಎಂಬ ವಿಷಯದ ಬಗ್ಗೆ ವಿಚಾರ ಸಂಕಿರಣವನ್ನು ಏರ್ಪಡಿಸುವ ಸಂಬಂಧ ಅನುದಾನ ರೂ.1.00 ಲಕ್ಷವನ್ನು ವೆಚ್ಚ ಮಾಡಲು ಮಂಜೂರಾತಿ ಆದೇಶ ಕೋರಿ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 63 ಸ್ಪೀಮರ 2005, ಬೆಂಗಳೂರು, ದಿನಾಂಕ: 07.06.2005.
2. ಪ್ರಾಚ್ಯವಸ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರ ಪತ್ರ ಸಂಖ್ಯೆ: ಡಿಎಎಂ/ ಎಸಿಟಿ 1/13/ವಿ.ಸ. 2005-06, ದಿನಾಂಕ: 26.09.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ:(1)ರ ಆದೇಶದಲ್ಲಿ 2005-06ನೇ ಸಾಲಿನಲ್ಲಿ "ಗುಲ್ಬರ್ಗಾ ಜಿಲ್ಲೆಯ ಅಧ್ಯಯನ" ವಿಚಾರ ಸಂಕಿರಣಕ್ಕೆ ರೂ.100 ಲಕ್ಷವನ್ನು ನಿಗದಿಪಡಿಸಿಕೊಳ್ಳಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಇವರು 2005-06ನೇ ಆರ್ಥಿಕ ಸಾಲಿಗೆ "ಗುಲ್ಬರ್ಗಾ ಜಿಲ್ಲೆಯ ಅಧ್ಯಯನ" ಎಂಬ ವಿಷಯದ ವಿಚಾರ ಸಂಕಿರಣಕ್ಕೆ ಲೆಕ್ಕ ಶೀರ್ಷಿಕೆ 2205-00-103-0-01 (ಯೋಜನೆ) -059 ಇತರ ಖರ್ಚು ಅಡಿಯಲ್ಲಿ ರೂ.1.00 ಲಕ್ಷವನ್ನು ಖರ್ಚು ಮಾಡಲು ಮಂಜೂರಾತಿ ಆದೇಶ ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯದ ನಿರ್ದೇಶನಾಲಯದ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಗುಲ್ಬರ್ಗಾ ಜಿಲ್ಲೆಯ ಅಧ್ಯಯನ ಎಂಬ ವಿಚಾರ ಸಂಕಿರಣಕ್ಕೆ ಅನುದಾನ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 237 ಕೆಎಂಯು 2005, ಬೆಂಗಳೂರು, ದಿನಾಂಕ: 23ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯದ ನಿರ್ದೇಶನಾಲಯ, ಮೈಸೂರು ಇವರು 2005-06ನೇ ಸಾಲಿನಲ್ಲಿ ಗುಲ್ಬರ್ಗಾದಲ್ಲಿ ಆಚರಿಸಲು ಉದ್ದೇಶಿಸಿರುವ "ಗುಲ್ಬರ್ಗಾ ಜಿಲ್ಲೆಯ ಅಧ್ಯಯನ" ಎಂಬ ವಿಚಾರ ಸಂಕಿರಣಕ್ಕೆ ರೂ.1.00/- (ರೂಪಾಯಿ ಒಂದು ಲಕ್ಷ ಮಾತ್ರ) ಮಂಜೂರಾತಿ ನೀಡಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯದ ನಿರ್ದೇಶನಾಲಯ, ಮೈಸೂರು ಇವರಿಗೆ ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2205-00-103-0-01 (ಯೋಜನೆ) -059 ಇತರ ಖರ್ಚು ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10.07.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾಗಿರುವ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

ಪಿ.ಆರ್.1642

## ಒಳಾಡಳಿತ ಸಚಿವಾಲಯ

**ವಿಷಯ :** ತುಮಕೂರು 3ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ದೌರ್ಜನ್ಯ ತಡೆ ಪ್ರಕರಣಗಳನ್ನು ನಡೆಸಲು ಕಾರ್ಯಾವಧಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಲಾ 253 ಎಲ್‌ಸಿಇ 99, ದಿನಾಂಕ: 25.06.2001.
2. ಸರ್ಕಾರಿ ಆದೇಶ ಸಂಖ್ಯೆ: ಲಾ 253 ಎಲ್‌ಎಸಿ 2002, (ಭಾಗ) ದಿನಾಂಕ: 22.02.2002.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಎನ್: ಸಿಶಾ-1:124: 2004-05, ದಿನಾಂಕ: 03.02.2005 ಮತ್ತು 16.08.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 25.06.2001ರ ಸರ್ಕಾರಿ ಆದೇಶದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ದೌರ್ಜನ್ಯ ತಡೆ ಪ್ರಕರಣಗಳನ್ನು ನಡೆಸಲು ತುಮಕೂರಿನ 3ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ಸರ್ಕಾರಿ ಅಭಿಯೋಜಕರು ಮತ್ತು ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸಲಾಗಿದೆ.

ಮೇಲೆ ಓದಲಾದ (2)ರ ದಿನಾಂಕ: 22.02.2002ರ ಸರ್ಕಾರಿ ಆದೇಶದಲ್ಲಿ ಸದರಿ ನ್ಯಾಯಾಲಯಕ್ಕೆ ಮಂಜೂರಾದ ಪಬ್ಲಿಕ್ ಪ್ರಾಸಿಕ್ಯೂಟರ್ ಮತ್ತು ಪೂರಕ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 25.06.2002ರಿಂದ 24.06.2004ರವರೆಗೆ ಅಥವಾ ಮುಂದಿನ ಆದೇಶದವರೆಗೆ ಎರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಅನುಮತಿ ನೀಡಲಾಗಿದೆ.

ಮೇಲೆ ಓದಲಾದ (3)ರ ದಿನಾಂಕ: 03.02.2005ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳು, ಬೆಂಗಳೂರು ಇವರು ಈ ಹುದ್ದೆಗಳನ್ನು ದಿನಾಂಕ:25.06.2004ರಿಂದ 24.06.2006ರವರೆಗೆ ಮುಂದುವರೆಸಲು ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 652 ಪಿಪಿಎ 2005, ಬೆಂಗಳೂರು, ದಿನಾಂಕ: 15ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಗಳ ಹಿನ್ನೆಲೆಯಲ್ಲಿ ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ದೌರ್ಜನ್ಯ ತಡೆ ಪ್ರಕರಣಗಳನ್ನು ನಡೆಸಲು ಸೃಜಿಸಲಾದ 3ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು, ಈ ನ್ಯಾಯಾಲಯಕ್ಕೆ ಮಂಜೂರಾದ ಈ ಕೆಳಕಾಣಿಸಿದ ಸರ್ಕಾರಿ ಅಭಿಯೋಜಕರು ಮತ್ತು ಪೂರಕ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 25.06.2004ರಿಂದ 24.06.2006ರವರೆಗೆ (ಎ.ದ.ಸ.) ಅಥವಾ ಮುಂದಿನ ಆದೇಶದವರೆಗೆ ಇವರೆಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಿದೆ.

| ಕ್ರಮ ಸಂಖ್ಯೆ | ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಸರ್ಕಾರಿ ಅಭಿಯೋಜಕರು | 1 (ಒಂದು) |
| 2. | ಶೀಘ್ರಲಿಪಿಗಾರ | 1 (ಒಂದು) |
| 3. | ಪ್ರಥಮದರ್ಜೆ ಸಹಾಯಕ | 1 (ಒಂದು) |
| 4. | ಬೆರಳಚ್ಚುಗಾರ | 1 (ಒಂದು) |
| 5. | ಅಟೆಂಡರ್ | 1 (ಒಂದು) |
| 6. | ಜವಾನರು | 1 (ಒಂದು) |
| | **ಒಟ್ಟು** | **6 (ಆರು)** |

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ-2014- ಅಡಿಸ್ಟ್ರೇಷನ್ ಆಫ್ ಜಸ್ಟೀಸ್-6-ಲೀಗಲ್ ಅಡ್ವೈಸರ್ ಅಂಡ್ ಕೌನ್ಸಿಲ್-02-ಡೈರೆಕ್ಟರ್ ಆಫ್ ಪ್ರಾಸಿಕ್ಯೂಷನ್ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.07.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಕಾನೂನು ಮತ್ತು ಸುವ್ಯವಸ್ಥೆ).

ಪಿ.ಆರ್.1643

**ವಿಷಯ :** ಶ್ರೀ ಆರ್.ಆರ್. ಭಟಕುರ್ಕಿ, ಸರ್ಕಾರಿ ಅಭಿಯೋಜಕರು, ಬಿಜಾಪುರ ಕರ್ತವ್ಯಲೋಪ ಆರೋಪದ ಬಗ್ಗೆ ಹೂಡಿರುವ ಇಲಾಖಾ ವಿಚಾರಣೆಯನ್ನು ಕೈಬಿಡುವ ಬಗ್ಗೆ.

**ಓದಲಾಗಿದೆ :**
1. ಕಾರಣ ಕೇಳುವ ನೋಟೀಸು ಸಂಖ್ಯೆ: ಲಾ 162 ಪಿಪಿಇ 2002 ದಿನಾಂಕ: 10.12.2002.
2. ಶ್ರೀ ಆರ್.ಆರ್. ಭಟಕುರ್ಕಿ, ಸರ್ಕಾರಿ ಅಭಿಯೋಜಕರು ಇವರ ಪ್ರತಿವಾದದ ಲಿಖಿತ ಹೇಳಿಕೆ ದಿನಾಂಕ: 02.01.2003.
3. ಸರ್ಕಾರಿ ಆದೇಶ ಸಂಖ್ಯೆ: ಲಾ 162 ಪಿಪಿಇ 02, ದಿನಾಂಕ: 02.05.2003 ಮತ್ತು 09.10.2003, 29.11.2003.
4. ವಿಚಾರಣಾಧಿಕಾರಿಯವರ ವಿಚಾರಣಾ ವರದಿ, ದಿನಾಂಕ: 07.08.2004.

**ಪ್ರಸ್ತಾವನೆ:**

ಶ್ರೀ ಆರ್.ಆರ್. ಭಟಕುರ್ಕಿ, ಸರ್ಕಾರಿ ಅಭಿಯೋಜಕರು, ಇವರು ಬೆಂಗಳೂರಿನ ಅಭಿಯೋಗ ನಿರ್ದೇಶಕರ ಕಛೇರಿಯಲ್ಲಿ ಅಭಿಯೋಗ ಉಪ ನಿರ್ದೇಶಕರು (ಕ್ರಿಮಿನಲ್) ಆಗಿ ಕಾರ್ಯನಿರ್ವಹಿಸುತ್ತಿದ್ದಾಗ, ತುಮಕೂರಿನ ಪ್ರಧಾನ ಸಿ.ಜೆ.ಎಂ. ನ್ಯಾಯಾಲಯದ ಸಿಸಿ ನಂ. 3873:93 (ಆರೋಪಿ ಶ್ರೀಮತಿ ಶಮೀರ ಬಾನು, ಅಪರಾಧ ಕಲಂ 14 ವಿದೇಶಿ ಕಾಯಿದೆ 1939) ಪ್ರಕರಣದಲ್ಲಿ ಕೂಲಂಕುಷವಾಗಿ ಕಾನೂನಿನ ಅಂಶಗಳನ್ನು ಆಳವಾಗಿ ಪರಿಶೀಲಿಸದೆ, ಕರ್ತವ್ಯದಲ್ಲಿ ಬೇಜವಾಬ್ದಾರಿಯಿಂದ ವರ್ತಿಸಿ, ಸದರಿ ಪ್ರಕರಣದಲ್ಲಿ ಆರೋಪಿಯು ಬಿಡುಗಡೆ ಆದೇಶವು ಸಮರ್ಪವಿದ್ದು, ಮೇಲ್ಮನವಿಗೆ ಅರ್ಹವಿಲ್ಲವೆಂದು ಕಡತವನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯಲ್ಲಿಯೇ ಮುಕ್ತಾಯಗೊಳಿಸಿ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3(1)ರ ಉಪನಿಯಮ (11) ಮತ್ತು (111) ಅನ್ನು ಉಲ್ಲಂಘಿಸಿರುವ ಆರೋಪದ ಬಗ್ಗೆ ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ: 10.12.2002ರಲ್ಲಿ ಕಾರಣ ಕೇಳುವ ತಿಳುವಳಿಕೆ ಪತ್ರವನ್ನು ಜಾರಿ ಮಾಡಲಾಗಿದೆ.

ಮೇಲೆ (2)ರಲ್ಲಿ ಓದಲಾಗಿರುವ ದಿನಾಂಕ: 02.01.2003ರಲ್ಲಿ ಆರೋಪಿ ಸರ್ಕಾರಿ ಅಧಿಕಾರಿ ಶ್ರೀ ಆರ್.ಆರ್.ಭಟಕುರ್ಕಿ ಇವರು ತಮ್ಮ ಲಿಖಿತ ಪ್ರತಿವಾದವನ್ನು ಹೇಳಿಕೆಯಲ್ಲಿ ಅವರ ಮೇಲೆ ಮಾಡಲಾಗಿರುವ ಆರೋಪಗಳನ್ನು ನಿರಾಕರಿಸಿ, ತಮ್ಮ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸಲಾಗಿದೆ ಮತ್ತು ಕರ್ನಾಟಕ ಸರ್ಕಾರಿ ನೌಕರರ (ನಡತೆ) ನಿಯಮಾವಳಿ 1966ರ ನಿಯಮ 3(1) ಉಪ ನಿಯಮ (11) ಮತ್ತು (111) ಅನ್ನು ಉಲ್ಲಂಘಿಸಿರುವುದಿಲ್ಲ ಮತ್ತು ದುರ್ನಡತೆ ಎಸಗಿರುವುದಿಲ್ಲವೆಂದು ತಮ್ಮ ಮೇಲೆ ಮಾಡಲಾಗಿರುವ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶಗಳಲ್ಲಿ ಸದರಿ ಆರೋಪಿತ ಸರ್ಕಾರಿ ಅಧಿಕಾರಿಯವರ ಮೇಲೆ ಮಾಡಲಾಗಿರುವ ಆರೋಪಗಳ ಸತ್ಯಾ ಸತ್ಯಾತೆಯ ಬಗ್ಗೆ ತಿಳಿಯಲು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ 11ರ ಅಡಿಯಲ್ಲಿ ಇಲಾಖಾ ವಿಚಾರಣೆ ಮಾಡಲು ಇಲಾಖಾ ವಿಚಾರಣಾಧಿಕಾರಿಯವರನ್ನು ನೇಮಿಸಲಾಗಿದೆ. ಆರೋಪಿತ ಸರ್ಕಾರಿ ಅಧಿಕಾರಿಗಳು ತಮ್ಮ ಮೇಲೆ ಮಾಡಲಾಗಿರುವ ಆರೋಪಗಳನ್ನು ನಿರಾಕರಿಸಿ ವಿಚಾರಣೆಗೊಳಪಡಿಸಲು ಮತ್ತು ತಮ್ಮ ಮೇಲೆ ಮಾಡಲಾಗಿರುವ ಆರೋಪಗಳ ಬಗ್ಗೆ ಪ್ರತಿ ರಕ್ಷಿಸಿಕೊಳ್ಳಲು ಶ್ರೀ ವಿ.ಕೆ. ಮಾನೆ, ಸರ್ಕಾರಿ ಅಭಿಯೋಜಕರು ಇವರ ಸಹಾಯವನ್ನು ಪಡೆದಿರುತ್ತಾರೆ. ಇಲಾಖಾ ವಿಚಾರಣೆಯಲ್ಲಿ 6 ಅಭಿಯೋಜನಾ ಪರ ಸಾಕ್ಷಿಗಳ ಸಾಕ್ಷ್ಯವನ್ನು ಪಡೆದು 19 ದಾಖಲೆಗಳನ್ನು ಗುರುತಿಸಲಾಗಿದೆ. ವಿಚಾರಣೆಯಲ್ಲಿ ಆರೋಪಿತ ಸರ್ಕಾರಿ ಅಧಿಕಾರಿಯು ತಮ್ಮನ್ನು ಪ್ರತಿವಾದಿ ಸಾಕ್ಷಿಯಾಗಿ ವಿಚಾರಣೆಗೆ ಒಳಪಡಲು ಒಪ್ಪದಿರುವುದರಿಂದ ಸದರಿ ನಿಯಮಾವಳಿಯ ನಿಯಮ 11(18)ರ ಅಡಿಯಲ್ಲಿ ಪರಿಸ್ಥಿತಿಗಳನ್ನು ವಿವರಿಸಲು ಅವಕಾಶವನ್ನು ನೀಡಿ ಅವರ ಹೇಳಿಕೆಯನ್ನು ದಾಖಲಿಸಿಕೊಳ್ಳಲಾಗಿದೆ. ಮತ್ತು ಉಭಯ ಪಕ್ಷಗಳ ಲಿಖಿತ ವಾದವಿವಾದವನ್ನು ಆಲಿಸಲಾಗಿದೆ.

ಇಲಾಖಾ ವಿಚಾರಣಾಧಿಕಾರಿಗಳು ತಮ್ಮ ದಿನಾಂಕ: 07.08.2004ರ ಇಲಾಖಾ ವಿಚಾರಣಾ ವರದಿಯಲ್ಲಿ ಆರೋಪಿತ ಸರ್ಕಾರಿ ಅಧಿಕಾರಿಯವರ ಮೇಲೆ ಮಾಡಲಾಗಿರುವ ಆರೋಪಗಳನ್ನು ಸಾಬೀತುಪಡಿಸಲು ಶಿಸ್ತಿನ ಪ್ರಾಧಿಕಾರಿಯು ವಿಫಲರಾಗಿರುತ್ತಾರೆ ಮತ್ತು ಆರೋಪಿತ ಸರ್ಕಾರಿ ಅಧಿಕಾರಿಯು ಕರ್ನಾಟಕ ಸರ್ಕಾರಿ ನೌಕರರ (ನಡತೆ) ನಿಯಮಾವಳಿ 1966ರ ನಿಯಮ 3(1)ರ ಉಪ ನಿಯಮ (1) (11) (111)ರ ಅಡಿಯಲ್ಲಿ ದುರ್ನಡತೆ ಎಸಗಿರುವುದಿಲ್ಲವೆಂದು, ಆರೋಪಿತ ಸರ್ಕಾರಿ ಅಧಿಕಾರಿಯು ಅವರ ಮೇಲೆ ಮಾಡಲಾಗಿರುವ ಆರೋಪಗಳು ದೋಷಿ ಅಲ್ಲವೆಂದು ವರದಿ ಮಾಡಿರುತ್ತಾರೆ. ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 42 ಪಿಪಿಇ 2004, ಬೆಂಗಳೂರು ದಿನಾಂಕ: 11ನೇ ನವೆಂಬರ್ 2005**

ಶ್ರೀ ಆರ್.ಆರ್.ಭಟಕುರ್ಕಿ, ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ, ಬಿಜಾಪುರ ಇವರ ಮೇಲೆ ತುಮಕೂರಿನ ಪ್ರಧಾನ ಸಿ.ಜೆ.ಎಂ. ನ್ಯಾಯಾಲಯದ ಸಿ.ಸಿ. ನಂ. 3873:93 (ಆರೋಪಿ ಶ್ರೀಮತಿ ಶಮೀಂ ಬಾನು, ಅಪರಾಧ ಕಲಂ 14 ವಿದೇಶಿ ಕಾಯಿದೆ 1939) ಪ್ರಕರಣದಲ್ಲಿ ಕರ್ತವ್ಯಲೋಪ ಎಸಗಿ ಕರ್ನಾಟಕ ಸರ್ಕಾರಿ ನೌಕರರ (ನಡತೆ) ನಿಯಮಾವಳಿ 1966ರ ನಿಯಮ 3(1)ರ ಉಪ ನಿಯಮ (11) ಮತ್ತು (111) ಅನ್ನು ಉಲ್ಲಂಘಿಸಿರುತ್ತಾರೆ ಎಂಬ ಆರೋಪಗಳಿಂದ ಈ ಮೂಲಕ ಮುಕ್ತಾಯಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ.
(ಕಾನೂನು ಮತ್ತು ಸುವ್ಯವಸ್ಥೆ ಮತ್ತು ಕಾಫಿಪೋಸ ಮತ್ತು ಅಭಿಯೋಗ).

ಪಿ.ಆರ್.1644

**ವಿಷಯ :** ಬೆಂಗಳೂರು ನಗರದ ಎನ್.ಡಿ.ಪಿ.ಎಸ್. ವಿಶೇಷ ನ್ಯಾಯಾಲಯದ ಸರ್ಕಾರಿ ಅಭಿಯೋಜಕರು ಮತ್ತು ಪೂರಕ ಸಿಬ್ಬಂದಿಗಳ ಹುದ್ದೆಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ ಆದೇಶ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಲಾ 184 ಎಲ್‌ಸಿಇ 95 ದಿನಾಂಕ: 13.03.1997.
2. ಅಧಿಸೂಚನೆ ಸಂಖ್ಯೆ:ಲಾ 184 ಎಲ್‌ಸಿಇ 1995 (ಪಿ) ದಿನಾಂಕ: 17.06.2002.
3. ಸರ್ಕಾರಿ ಆದೇಶ ಸಂಖ್ಯೆ: ಲಾ 90 ಪಿಪಿಇ 99 ದಿನಾಂಕ: 24.09.1999.
4. ಸರ್ಕಾರಿ ಆದೇಶ ಸಂಖ್ಯೆ: ಲಾ 26 ಎಲ್‌ಎಸಿ 2004 ದಿನಾಂಕ: 29.03.2004.
5. ಸರ್ಕಾರಿ ಆದೇಶ ಸಂಖ್ಯೆ: ಲಾ 36 ಎಲ್‌ಎಸಿ 2005, ದಿನಾಂಕ: 16.03.2005.
6. ನಿರ್ದೇಶಕರು, ಅಭಿಯೋ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಎನ್: ಸಿಶಾ-1, 07: 2005-06 ದಿನಾಂಕ: 25.08.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ: 13.03.1997ರಲ್ಲಿ ಬೆಂಗಳೂರು ಮಹಾನಗರ ಕ್ಷೇತ್ರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಯಲ್ಲಿ ಉದ್ಭವಿಸುವ ಎನ್.ಡಿ.ಪಿ.ಎಸ್. ಅಧಿನಿಯಮ 1985ರ ಅಡಿಯಲ್ಲಿ ದಾಖಲಾಗಿರುವ ಪ್ರಕರಣಗಳ ವಿಚಾರಣೆಗಾಗಿಯೇ ವಿಶೇಷ ನ್ಯಾಯಾಲಯ ಮತ್ತು ನ್ಯಾಯಿಕ ವಿಭಾಗದ ಹುದ್ದೆಗಳೊಂದಿಗೆ, ಸದರಿ ನ್ಯಾಯಾಲಯಕ್ಕೆ ಹೊಂದಿಕೊಂಡಿರುವಂತೆ ಅಭಿಯೋಜನಾ ವಿಭಾಗದ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ಸೃಜಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ |
|---|---|---|
| 1. | ಸರ್ಕಾರಿ ಅಭಿಯೋಜಕರು | 01 |
| 2. | ಪ್ರಥಮ ದರ್ಜೆ ಸಹಾಯಕರು | 01 |
| 3. | ಶೀಘ್ರಲಿಪಿಗಾರರು | 01 |
| 4. | ಬೆರಳಚ್ಚುಗಾರ | 01 |
| 5. | ದಲಾಯತ್‌ರು | 02 |

ಮೇಲೆ (2)ರಲ್ಲಿ ಓದಲಾಗಿರುವ ದಿನಾಂಕ: 17.06.2002ರ ಅಧಿಸೂಚನೆಯಲ್ಲಿ ಸದರಿ ನ್ಯಾಯಾಲಯವು ದಿನಾಂಕ: 27.05.2002ಅನ್ನು ಕಾರ್ಯಾರಂಭ ಮಾಡುವ ದಿನಾಂಕವೆಂದು ಗೊತ್ತುಪಡಿಸಲಾಗಿದೆ ಮತ್ತು ಮೇಲೆ (3)ರಲ್ಲಿ ಓದಲಾಗಿರುವ ದಿನಾಂಕ: 24.09.1999ರ ಸರ್ಕಾರಿ ಆದೇಶದಲ್ಲಿ ಸದರಿ ನ್ಯಾಯಾಲಯಕ್ಕೆ ಹೊಂದಿಕೊಂಡಿರುವ ಸರ್ಕಾರಿ ಅಭಿಯೋಜಕರ ಕಛೇರಿಯಲ್ಲಿ ದಿನಾಂಕ: 13.03.1997ರ ಸರ್ಕಾರಿ ಆದೇಶದಲ್ಲಿ ಸೃಜಿಸಲಾಗಿದ್ದ ಹುದ್ದೆಗಳಲ್ಲಿ ಒಂದು ಬೆರಳಚ್ಚುಗಾರ ಹುದ್ದೆ ಮತ್ತು ಒಂದು ದಲಾಯತ್ ಹುದ್ದೆಯನ್ನು ರದ್ದುಪಡಿಸಲಾಗಿದೆ. ಮೇಲೆ (4)ರಲ್ಲಿ ಓದಲಾಗಿರುವ ದಿನಾಂಕ: 29.03.2004ರ ಸರ್ಕಾರಿ ಆದೇಶದಲ್ಲಿ ಸದರಿ ನ್ಯಾಯಾಲಯಕ್ಕೆ ಹೊಂದಿಕೊಂಡಿರುವ ಅಭಿಯೋಜನಾ ವಿಭಾಗಕ್ಕೆ ಮಂಜೂರಾದ ಹುದ್ದೆಗಳನ್ನು ದಿನಾಂಕ: 01.04.2001 ರಿಂದ 31.03.2005ರ ವರೆಗೆ ಮುಂದುವರೆಸಲಾಗಿದೆ. ಮೇಲೆ (5)ರಲ್ಲಿ ಓದಲಾಗಿರುವ ದಿನಾಂಕ: 25.08.2005ರ ಪತ್ರದಲ್ಲಿ ಅಭಿಯೋಜನೆ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು, ಬೆಂಗಳೂರು, ಸರ್ಕಾರಿ ಆದೇಶ ಸಂಖ್ಯೆ: ಲಾ 36 ಎಲ್‌ಎಸಿ 05 ದಿನಾಂಕ: 16.03.2005ರಲ್ಲಿ ಬೆಂಗಳೂರು ನಗರದ ಎನ್‌ಡಿಪಿಎಸ್ ವಿಶೇಷ ನ್ಯಾಯಾಲಯದ ಕಾರ್ಯಾವಧಿಯನ್ನು ದಿನಾಂಕ: 01.04.2005 ರಿಂದ 31.03.2007ರ ವರೆಗೆ ಮುಂದುವರೆಸಿ ಆದೇಶವನ್ನು ಹೊರಡಿಸಲಾಗಿರುವುದರಿಂದ, ಸದರಿ ನ್ಯಾಯಾಲಯಕ್ಕೆ ಹೊಂದಿಕೊಂಡಿರುವ ಅಭಿಯೋಜನಾ ವಿಭಾಗದಲ್ಲಿ ಸೃಜಿಸಲಾಗಿರುವ ತಾತ್ಕಾಲಿಕ ಹುದ್ದೆಗಳನ್ನು ಸಹಾ ದಿನಾಂಕ:01.04.2005 ರಿಂದ 31.03.2007ರ ವರೆಗಿನ ಅವಧಿಯವರೆಗೆ ಮುಂದುವರೆಸುವಂತೆ ಪ್ರಸ್ತಾವನೆಯನ್ನು ಆದೇಶಿಸಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 690 ಪಿಪಿಇ 2005, ಬೆಂಗಳೂರು, ದಿನಾಂಕ: 21ನೇ ನವೆಂಬರ್, 2005**

ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ: 13.03.1997ರ ಸರ್ಕಾರಿ ಆದೇಶದಲ್ಲಿ ಬೆಂಗಳೂರು ನಗರದ ವಿಶೇಷ ಎನ್.ಡಿ.ಪಿ.ಎಸ್. ನ್ಯಾಯಾಲಯಕ್ಕೆ ಹೊಂದಿಕೊಂಡಿರುವ ಅಭಿಯೋಜನಾ ವಿಭಾಗದಲ್ಲಿ ಸೃಜಿಸಲಾಗಿರುವ ಮತ್ತು ಚಾಲ್ತಿಯಲ್ಲಿರುವ ಈ ಕೆಳಕಂಡ ಹುದ್ದೆಗಳ ಅವಧಿಯನ್ನು ದಿನಾಂಕ:01.04.2005 ರಿಂದ 31.03.2007ರ ವರೆಗಿನ ಅವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳೆರಡರಲ್ಲಿ ಯಾವುದು ಮೊದಲೋ ಆ ಅವಧಿಯವರೆಗೆ ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ: 10.03.1997ರ ಸರ್ಕಾರಿ ಆದೇಶದಲ್ಲಿ ಈ ಹುದ್ದೆಗಳನ್ನು ಸೃಜಿಸಲು ವಿಧಿಸಿರುವ ಷರತ್ತಿಗೆ ಒಳಪಟ್ಟು ಮುಂದುವರೆಸಲಾಗಿದೆ.

1) ಸರ್ಕಾರಿ ಅಭಿಯೋಜಕರು 01 ಹುದ್ದೆ
2) ಪ್ರಥಮ ದರ್ಜೆ ಸಹಾಯಕರು 01 ಹುದ್ದೆ
3) ಶೀಘ್ರಲಿಪಿಗಾರರು 01 ಹುದ್ದೆ
4) ದಲಾಯತ್ 01 ಹುದ್ದೆ

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2014-00-114-0-02 ಅಭಿಯೋಗ ನಿರ್ದೇಶಕರು ಇದರ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.07.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿದ ಅಧಿಕಾರ ಪ್ರತ್ಯಾಯೋಜನೆ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ.

(ಕಾನೂನು ಮತ್ತು ಸುವ್ಯವಸ್ಥೆ ಮತ್ತು ಕಾಫಿಪೋಸ ಮತ್ತು ಅಭಿಯೋಗ).

ಪಿ.ಆರ್.1645

**ವಿಷಯ :** ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಮಡಿಕೇರಿ ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಎನ್:
2. ಕಾರಣ ಕೇಳುವ ತಿಳುವಳಿಕೆ ಪತ್ರ ಲಾ 95 ಪಿಪಿಇ 2001, ದಿನಾಂಕ: 01.06.2004.
3. ಶ್ರೀ ಎಂ. ನರಸಪ್ಪ, ಹಿಂದಿನ ಅಧಿಕ ಸರ್ಕಾರಿ ಅಭಿಯೋಜಕರು, ಚಿಕ್ಕಮಗಳೂರು ಇವರ ರಕ್ಷಣಾತ್ಮಕ ಹೇಳಿಕೆ, ದಿನಾಂಕ: 25.08.2004.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 3ನೇ ಸೇಇವಿ 96 ದಿನಾಂಕ: 24.04.1998.

**ಪ್ರಸ್ತಾವನೆ:**

ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಮಡಿಕೇರಿ, ಇವರು ಈ ಹಿಂದೆ ಚಿಕ್ಕಮಗಳೂರಿನಲ್ಲಿ ಅಧಿಕ ಸರ್ಕಾರಿ ಅಭಿಯೋಜಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಚಿಕ್ಕಮಗಳೂರು ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ, ಚಿಕ್ಕಮಗಳೂರು ಗ್ರಾಮಾಂತರ ಆರಕ್ಷಕ ಠಾಣೆ ಗುನ್ನೆ ನಂ. 188:2000ರಲ್ಲಿ ಆರೋಪಿಯಾದ ಶ್ರೀ ಜಿ. ಸುರೇಶ್ ಅವರು ಕ್ರಿಮಿನಲ್ ಮಿಸ್. 120:2000ರಲ್ಲಿ ನಿರೀಕ್ಷಣಾ ಜಾಮೀನಿಗೆ ಅರ್ಜಿ ಸಲ್ಲಿಸಿದ್ದು, ಜಾಮೀನು ದೊರಕಿಸಿಕೊಡಲು ರೂ.10,000-00 ಕೊಡಬೇಕೆಂದು ಒತ್ತಾಯಿಸಿ, ರೂ.5,000-00 ಗಳನ್ನು ಪಡೆದಿರುತ್ತಾರೆ. ಪ್ರಕರಣದ ದೋಷಾರೋಪಣಾ ಪಟ್ಟಿಯನ್ನು ಸಂಬಂಧಪಟ್ಟ ತನಿಖಾಧಿಕಾರಿ ದಿನಾಂಕ: 01.12.2000ರಂದು ಸ್ವೀಕರಿಸಿದ್ದು, ಸದರಿ ದೋಷಾರೋಪಣ ಪಟ್ಟಿಯನ್ನು ದಿನಾಂಕ: 02.02.2001ರ ವರೆಗೆ ತಮ್ಮ ಬಳಿಯೇ ಬಾಕಿ ಇಟ್ಟುಕೊಂಡಿರುತ್ತಾರೆ. ಅಲ್ಲದೆ ಸದರಿ ಪ್ರಕರಣದ ಆರೋಪಿ ಶ್ರೀ ಜಿ. ಸುರೇಶ್ ರವರ ವಿರುದ್ಧ ದಾಖಲಾಗಿರುವ ಪ್ರಕರಣದ ದೋಷಾರೋಪಣ ಪಟ್ಟಿಯನ್ನು ಯಥಾಸ್ಥಿತಿಯಲ್ಲಿ ನ್ಯಾಯಾಲಯಕ್ಕೆ ಸಲ್ಲಿಸಲು ರೂ. 5,000-00 ಅನ್ನು ನೀಡುವಂತೆ ಒತ್ತಾಯಿಸಿ ತಮ್ಮ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸದೇ ಸರ್ಕಾರಿ ನೌಕರರಿಗೆ ಶೋಭಿಸದ ರೀತಿಯಲ್ಲಿ ನಡೆದುಕೊಂಡು ದುರ್ನಡತೆ ಎಸಗಿ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3(1)ರ ಉಪನಿಯಮ (11) ಮತ್ತು (111) ಅನ್ನು ಉಲ್ಲಂಘಿಸಿರುವುದರಿಂದ ಅವರ ವಿರುದ್ಧ ಶಿಸ್ತುಕ್ರಮ ಜರುಗಿಸುವಂತೆ (ಮೇಲೆ) (1)ರಲ್ಲಿ ಓದಲಾದ ಪತ್ರದಲ್ಲಿ ಅಭಿಯೋಗ ನಿರ್ದೇಶಕರು ಸರ್ಕಾರವನ್ನು ಕೋರಿರುತ್ತಾರೆ.

ಶ್ರೀ ಎಂ. ನರಸಪ್ಪ ಇವರ ವಿರುದ್ಧ ಆರೋಪದ ಬಗ್ಗೆ ಅವರಿಗೆ ಸರ್ಕಾರವು 1957ರ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ 11ರ ಮೇರೆಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ ದೋಷಾರೋಪಣದ ಬಗ್ಗೆ ತಮ್ಮ ಪ್ರತಿವಾದದ ಲಿಖಿತ ಹೇಳಿಕೆಯನ್ನು ಸಲ್ಲಿಸಬೇಕೆಂದು ಮೇಲೆ (2)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನಲ್ಲಿ ನಿರ್ದೇಶನವನ್ನು ನೀಡಲಾಗಿತ್ತು.

ಶ್ರೀ ಎಂ. ನರಸಪ್ಪ ಇವರು ಮೇಲೆ (3)ರಲ್ಲಿ ಓದಲಾದ ದಿನಾಂಕ: 25.08.2004ರಲ್ಲಿ ತಮ್ಮ ಪ್ರತಿವಾದದ ಲಿಖಿತ ಹೇಳಿಕೆಯನ್ನು ಸಲ್ಲಿಸಿ ತಮ್ಮ ಮೇಲಿನ ದೋಷಾರೋಪಣೆಯನ್ನು ಒಪ್ಪಿಕೊಳ್ಳದೇ ಸಾರಾಸಗಟಾಗಿ ಅಲ್ಲಗಳೆದು, ತಮ್ಮ ವಿವರಣೆಯನ್ನು ಒಪ್ಪಿಕೊಂಡು, ಇಲಾಖಾ ವಿಚಾರಣೆಯನ್ನು ಕೈಬಿಡಬೇಕೆಂದು ಪ್ರಾರ್ಥಿಸಿರುತ್ತಾರೆ.

ಶ್ರೀ ಎಂ. ನರಸಪ್ಪ, ಇವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಸರ್ಕಾರವು ಪರಿಶೀಲಿಸಿ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯು ಒಪ್ಪುವಂತದಲ್ಲವಾದ್ದರಿಂದ, ಸದರಿ ಆರೋಪಿತ ಅಧಿಕಾರಿಯವರ ಮೇಲಿನ ಆರೋಪದ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಹಿತದೃಷ್ಟಿಯಿಂದ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ಮೇಲೆ (4)ರಲ್ಲಿ ಓದಲಾದ ದಿನಾಂಕ: 24.04.1996ರ ಆಗಿನ ಆದೇಶದ ಅನ್ವಯ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 69 ಪಿಪಿಇ 2005 ಬೆಂಗಳೂರು, ದಿನಾಂಕ: 17ನೇ ನವೆಂಬರ್, 2005**

ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಮಡಿಕೇರಿ, ಹಿಂದಿನ ಅಪರ ಸರ್ಕಾರಿ ಅಭಿಯೋಜಕರು, ಚಿಕ್ಕಮಗಳೂರು ಇವರ ವಿರುದ್ಧದ ಆಪಾದನೆಯ ಬಗ್ಗೆ 1957ರ ಕೆ.ಸಿ.ಎಸ್. (ವ.ನಿ.ಮೇ) ನಿಯಮಗಳ 11ನೇ ನಿಯಮದ ಉಪ ನಿಯಮ (2)ರನ್ವಯ ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96 ದಿನಾಂಕ:24.04.1998ರ ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಸದರಿ ನಿಯಮಗಳ ನಿಯಮ 11 ಮತ್ತು 11ಎ ರನ್ವಯ ಶ್ರೀಯುತ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ.2211, ಹೆಚ್.ಎ.ಎಲ್. 3ನೇ ಹಂತ 80 ಅಡಿ ರಸ್ತೆ, ಕೋಡಿಹಳ್ಳಿ, ಬೆಂಗಳೂರು-560 008, ಇವರನ್ನು ಪ್ರತಿ ಪ್ರಕರಣಕ್ಕೆ ರೂ. 5,000-00 (ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆ (ಕನ್ಸಾಲಿಡೇಟೆಡ್ ರೆಮ್ಯುನರೇಷನ್) ಹಾಗೂ ಪ್ರತಿ ಪ್ರಕರಣಕ್ಕೆ ರೂ.1,000-00 (ರೂ. ಒಂದು ಸಾವಿರ ಮಾತ್ರ) ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್) ನೀಡುವ ಆಧಾರದ ಮೇಲೆ ವಿಚಾರಣಾಧಿಕಾರಿಯವರನ್ನಾಗಿ ಈ ಕೆಳಕಂಡ ಷರತ್ತುಗಳೊಂದಿಗೆ ನೇಮಿಸಿದೆ.

1) ಇಲಾಖಾ ವಿಚಾರಣೆಯನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖಾ ನಿರ್ದೇಶಕರ ಕಛೇರಿಯಲ್ಲಿ ನಡೆಸತಕ್ಕದ್ದು.
2) ವಿಚಾರಣಾ ಪ್ರಾಧಿಕಾರಕ್ಕೆ ವಿಚಾರಣೆ ಮುಕ್ತಾಯವಾಗುವವರೆಗೆ ಅಭಿಯೋಗ ನಿರ್ದೇಶಕರು ತಮ್ಮ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ: ಬೆರಳಚ್ಚುಗಾರರ ಸೇವೆಯನ್ನು ಒದಗಿಸುವುದರ ಜೊತೆಗೆ ಅಗತ್ಯ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.
3) ಇಲಾಖಾ ವಿಚಾರಣೆಯನ್ನು 2 ತಿಂಗಳೊಳಗಾಗಿ ಮುಗಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
4) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು ಪ್ರತಿ ಪ್ರಕರಣದ ವಿಚಾರಣೆ ರೂ.5,000-00 ಸಂಚಿತ ಸಂಭಾವನೆ ಹಾಗೂ ಪ್ರತಿ ಪ್ರಕರಣದ ವಿಚಾರಣೆ ರೂ.1,000-00 ವಾಹನ ಭತ್ಯೆಯನ್ನು ವಿಚಾರಣಾಧಿಕಾರಿಯವರು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಸಂದಾಯ ಮಾಡತಕ್ಕದ್ದು.
5) ಈ ಸಂಬಂಧ ತಗಲುವ ವೆಚ್ಚವನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ 2003-04ನೇ ಸಾಲಿನ ಆಯವ್ಯಯದಲ್ಲಿನ ಕಛೇರಿ ವೇತನದ ಲೆಕ್ಕ ಶೀರ್ಷಿಕೆಯಡಿಯಲ್ಲಿ ಒದಗಿಸಲಾದ ಮೊತ್ತದಿಂದ ಭರಿಸತಕ್ಕದ್ದು.

ಸದರಿ ಪ್ರಕರಣದಲ್ಲಿ ಸರ್ಕಾರದ ಪರವಾಗಿ ದಾಖಲೆಗಳನ್ನು ವಿಚಾರಣಾ ಪ್ರಾಧಿಕಾರದ ಮುಂದೆ ಮಂಡಿಸಲು ಮೇಲ್ಕಂಡ ನಿಯಮಗಳ ನಿಯಮ 11(5)(ಸಿ) ರನ್ವಯ ಶ್ರೀಯುತ ಟಿ. ನಾಗರಾಜ ರೆಡ್ಡಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ನಿರ್ದೇಶಕರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯವರನ್ನಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್.1646

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ.
(ಕಾನೂನು ಮತ್ತು ಸುವ್ಯವಸ್ಥೆ ಮತ್ತು ಕಾಫಿಪೋಸ ಮತ್ತು ಅಭಿಯೋಗ).

**PERSONNEL ADMINISTRATIVE AND REFORMS SECRETARIAT**
**CORRIGENDUM**
**No. DPAR 73 SFP 2005, Bangalore, Dated: 22nd November, 2005**

In notifications of even number Dated: 16.08.2005 and 08.11.2005 regarding promotion of Sri S.K. Ramalinge Gowda, IFS, (KN-76) and Sri N. Chnadrashekara Murthy, IFS, (KN-76) to the rank of Additional Principal Chief Conservator of Forests, the pay scale appeared "Rs.24050-650-26000" shall be and shall always be corrected and read as "Rs.22400-525-24500".

By Order and in the Name of the Governor of Karnataka,
**K. SUDHAKARA SHETTY**
Under Secretary to Government,
DPAR (Services-1).

PR-1647

**Sub :** Abolition of the post of Development Commissioner, North Karnataka, Belgaum.
**Read :** Government Notification No. DPAR 144 SAS 2003, Dated: 21.05.2003.

**Preamble:**

In the Government Order Dated: 21.05.2003 read above, the post of Development Commissioner, North Karnataka, Belguam has been created. With the creation of posts of Regional Commissioners for Belgaum and Gulbarga regions, the functions and tasks currently assigned to Development Commissioner, North Karnataka. Belgaum are required to be exercised by respective Regional Commissioners within their jurisdiction. It has therefore been decided to abolish the post of Development Commissioner, North Karnataka, Belgaum. Hence the following order.

**No. DPAR 530 SAS 2005, Bangalore, Dated: 24th November, 2005**

In the circumstances explained in the preamble, the posts of Development Commissioner, North Karnataka, Belgaum and supporting staff created in G.O. No. DPAR 144 SAS 2003, Dated: 21.05.2003 are abolished from the Date Sri V. Umesh, IAS assumes charge as Regional Commissioner, Belgaum in pursuance of Government Notification No. DPAR 443 SAS 2005, Dated: 12.11.2005. The Deputy Commissioner, Belgaum shall give alternate postings to the supporting staff attached to the Development Commissioner, North Karnataka, Belgaum.

By Order and in the Name of the Governor of Karnataka,
**K. SUDHAKARA SHETTY**
Under Secretary to Government,
DPAR (Services-1).

PR-1648

**ಇಂಧನ ಸಚಿವಾಲಯ**

**ವಿಷಯ :** ಅತ್ಯಾವಶ್ಯಕ ಸೇವೆಗಳ ನಿರ್ವಹಣಾ ಅಧಿನಿಯಮ 1994ರ ಅಡಿಯಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ಖಾಸಗಿ ವಿದ್ಯುತ್ ಉತ್ಪಾದನಾ ಸಂಸ್ಥೆಗಳ ನೌಕರರ ಕಾರ್ಯನಿರ್ವಹಣಾ ನಿರಾಕರಣೆಯನ್ನು ಬಹಿಷ್ಕರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 96 ಪಿಪಿಸಿ 2004, ದಿನಾಂಕ: 04.06.2005.
2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಎ1/ ಆರ್1 ಹೆಚ್/ 5433 ದಿನಾಂಕ: 15.11.2005.

**ಪ್ರಸ್ತಾವನೆ:**

ಕರ್ನಾಟಕ ಅತ್ಯಾವಶ್ಯಕ ನಿರ್ವಹಣಾ ಕಾಯ್ದೆ 1994ರನ್ವಯ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ರಾಜ್ಯದ ಇತರ ಎಲ್ಲಾ ಖಾಸಗಿ ವಿದ್ಯುತ್ ಉತ್ಪಾದನಾ ಸಂಸ್ಥೆಗಳ ಎಲ್ಲಾ ವರ್ಗದ ನೌಕರರಿಗೂ ಅನ್ವಯವಾಗುವಂತೆ ದಿನಾಂಕ: 01.07.2005ರಿಂದ ಜಾರಿಗೆ ಬರುವಂತೆ ಆರು ತಿಂಗಳ ಅವಧಿಗೆ ಕರ್ತವ್ಯ ನಿರ್ವಹಣಾ ನಿರಾಕರಣೆಯನ್ನು ಓದಲಾದ (1)ರ ಆದೇಶದಲ್ಲಿ ನಿಷೇದಿಸಲಾಗಿತ್ತು. ಓದಲಾದ (2)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಇವರು ರಾಜ್ಯದಲ್ಲಿ ಪ್ರಸಕ್ತ ಬಿಕ್ಕಟ್ಟು ಮುಂದುವರಿದಿರುವುದರಿಂದ ವಿದ್ಯುತ್ ಉತ್ಪಾದನಾ ಕಾರ್ಯದಲ್ಲಿ ತೊಡಗಿಸಿಕೊಂಡಿರುವ ನೌಕರರು ಹಠಾತ್ ಮುಷ್ಕರ ನಡೆಸಿದಲ್ಲಿ ಪರಿಸ್ಥಿತಿಯನ್ನು ಎದುರಿಸುವುದು ಕಷ್ಟಕರವಾಗುವ ಹಿನ್ನಲೆಯಲ್ಲಿ ದಿನಾಂಕ: 01.01.2006 ರಿಂದ ಜಾರಿಗೆ ಬರುವಂತೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಎಲ್ಲಾ ಸೇವೆಗಳ ಕರ್ತವ್ಯ ನಿರ್ವಹಣಾ ನಿರಾಕರಣೆಯನ್ನು ನಿಷೇಧಿಸಿ ಆದೇಶ ಹೊರಡಿಸಬೇಕೆಂದು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 96 ಪಿಪಿಸಿ 2004, ಬೆಂಗಳೂರು, ದಿನಾಂಕ: 22ನೇ ನವೆಂಬರ್, 2005**

ಕರ್ನಾಟಕ ಅತ್ಯಾವಶ್ಯಕ ಸೇವೆಗಳ ನಿರ್ವಹಣಾ ಅಧಿನಿಯಮ 1994ರನ್ವಯ ಕರ್ನಾಟಕ ವಿದ್ಯುತ್ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಉತ್ಪಾದನೆ, ಸಂಗ್ರಹಣೆ, ವಿತರಣೆ, ಸರಬರಾಜು ಅಥವಾ ಪ್ರಸರಣಕ್ಕೆ ಸಂಬಂಧಿಸಿದ ಸೇವೆಯನ್ನು ಅತ್ಯಾವಶ್ಯಕ ಸೇವೆಗಳ ನಿರ್ವಹಣಾ ಅಧಿನಿಯಮ 1994ರ ಪ್ರಕರಣ (3)ರ ಉಪ ಪ್ರಕರಣ (3)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಹಾಗೂ ರಾಜ್ಯದ ಎಲ್ಲಾ ಖಾಸಗಿ ವಿದ್ಯುತ್ ಉತ್ಪಾದನಾ ಸಂಸ್ಥೆಗಳ ಎಲ್ಲಾ ವರ್ಗದ ಸೇವೆಗಳ ಅನ್ವಯವಾಗುವಂತೆ ದಿನಾಂಕ: 01.01.2006 ರಿಂದ 30.06.2006ರವರೆಗೆ ಆರು ತಿಂಗಳ ಅವಧಿಗೆ ಕರ್ತವ್ಯ ನಿರ್ವಹಣಾ ನಿರಾಕರಣೆಯನ್ನು ನಿಷೇದಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

ಪಿ.ಆರ್.1649

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎನ್. ಉಮಾಪತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 19 ಎಸ್‌ಇಎನ್ 2004, ದಿನಾಂಕ: 28.06.2005.

2. ಶ್ರೀ ಎನ್. ಉಮಾಪತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವರದಿ ದಿನಾಂಕ: 08.11.2005.

**ಪ್ರಸ್ತಾವನೆ:**

ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ಪುರಸಭೆಗೆ ಸಂಬಂಧಿಸಿದಂತೆ 167'x147' ಅಡಿ ಅಳತೆಯ ನಿವೇಶನವನ್ನು ಶ್ರೀ ಭೀಮಣ್ಣ ಎನ್ನುವವರಿಗೆ ಚಿತ್ರಮಂದಿರ ನಿರ್ಮಾಣಕ್ಕಾಗಿ ಸರ್ಕಾರಿ ಆದೇಶ ಸಂಖ್ಯೆ: ನಅಇ 180 ಟಿಎಂಡಿ 95 ದಿನಾಂಕ: 18.01.1997ರಲ್ಲಿ ಒಂದು ಚದರ ಅಡಿಗೆ ರೂ.100/- ರಂತೆ ಅನ್ನುವುದಕ್ಕೆ ಬದಲಾಗಿ ಒಂದು ಚದರ ಮೀಟರ್‌ಗೆ ರೂ.100/- ಎಂದು ನಮೂದಿಸಿ ಕಛೇರಿ ಪ್ರತಿಯಲ್ಲಿ ಒಂದು ಚದರ ಅಡಿಗೆ ತಿದ್ದಿ ಹೊರಡಿಸಿ ಚಳ್ಳಕೆರೆ ಪುರಸಭೆಗೆ ನಷ್ಟ ಉಂಟಾಗಲು ಕಾರಣರಾದ ಹಾಗೂ ಟಿಪ್ಪಣಿ ಹಾಳೆ ನಾಶಪಡಿಸಿದ ಆರೋಪಕ್ಕಾಗಿ ಶ್ರೀ ಡಿ.ಬಿ. ಗಣಾಚಾರಿ, ಶ್ರೀ ಎಸ್.ಆರ್.ಹಿರೇಮಠ, ಸರ್ಕಾರದ ಅಧೀನ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ಸಚಿವಾಲಯ ಹಾಗೂ ಶ್ರೀ ಮುನಿರಾಜಪ್ಪ, ಹಿರಿಯ ಸಹಾಯಕರು ಅವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 28.06.2005ರ ಸರ್ಕಾರಿ ಆದೇಶದಲ್ಲಿ ಶ್ರೀ ಉಮಾಪತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ: 08.11.2005ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 19 ಎಸ್‌ಇಎನ್ 2004, ಬೆಂಗಳೂರು, ದಿನಾಂಕ: 25ನೇ ನವೆಂಬರ್, 2005**

ಸರ್ಕಾರವು ಶ್ರೀ ಉಮಾಪತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96, ದಿನಾಂಕ: 24.04.1998 ರನ್ವಯ ರೂ.5,000/- (ಐದು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ: 04.03.2002 ರನ್ವಯ ರೂ.2,000/- (ಎರಡು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗ್ಗೆ ಹೆಚ್ಚಳವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052- ಸಚಿವಾಲಯ ಸಾಮಾನ್ಯ ಸೇವೆಗಳು-090- ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-051 ಸಾಮಾನ್ಯ ವೆಚ್ಚಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್.1650

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ :** ಶ್ರೀ ಕೆ.ಎಂ. ತಮ್ಮಯ್ಯ, ಪ್ರಿಸೈಡಿಂಗ್ ಆಫೀಸರ್, 3ನೇ ಅಪರ ಕಾರ್ಮಿಕ ನ್ಯಾಯಾಲಯ, ಬೆಂಗಳೂರು, ಇವರ ಸೇವೆಯನ್ನು 60 ವರ್ಷಗಳ ಮುಂದುವರೆಸುವ ಬಗ್ಗೆ.

**ಓದಲಾಗಿದೆ :** ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳುರು, ಇವರ ಪತ್ರ ಸಂಖ್ಯೆ: ಜಿಓಬಿ (1) 338:2004, ದಿನಾಂಕ: 25.10.2005.

**ಪ್ರಸ್ತಾವನೆ:**

ಜಿಲ್ಲಾ ನ್ಯಾಯಾಧೀಶರ ಸೇವೆಯನ್ನು 58 ವರ್ಷ ನಂತರವೂ ಮುಂದುವರೆಸುವ ಬಗ್ಗೆ ಉಚ್ಚ ನ್ಯಾಯಾಲಯದ ಸ್ಕ್ರೀನಿಂಗ್ ಸಮಿತಿ ಮೌಲ್ಯಮಾಪನ ಮಾಡಿ 58 ವರ್ಷ ನಂತರವೂ ಕರ್ತವ್ಯ ನಿರ್ವಹಿಸಲು ಅರ್ಹರೆಂದು ತೀರ್ಮಾನಿಸಿದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 95 (ಎ)ರ ಅನ್ವಯ 58 ವರ್ಷಗಳ ವಯಸ್ಸಿನ ನಂತರ 60 ವರ್ಷಗಳವರೆಗೆ ಮುಂದುವರೆಸಬಹುದಾಗಿದೆ. ಅದರಂತೆ ಶ್ರೀ ಕೆ.ಎಂ. ತಮ್ಮಯ್ಯ, ಪ್ರಿಸೈಡಿಂಗ್ ಆಫೀಸರ್, 3ನೇ ಅಪರ ಕಾರ್ಮಿಕ ನ್ಯಾಯಾಲಯ, ಬೆಂಗಳೂರು ಇವರ ಗೌಪ್ಯ ವರದಿ, ನಿರ್ವಹಿಸಿದ ಕಾರ್ಯದಕ್ಷತೆ, ಇವರ ಉಪಯುಕ್ತ ಸೇವಾ ಸಮರ್ಥತೆಗಳನ್ನು ಪರಿಗಣಿಸಿ ಇವರನ್ನು 58 ವರ್ಷಗಳ ನಂತರ ಅಂದರೆ 60 ವರ್ಷಗಳವರೆಗೆ ಸೇವೆಯಲ್ಲಿ ಮುಂದುವರೆಸಲು ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ: 19.10.2005ರಂದು ತೀರ್ಮಾನಿಸಿದ್ದು, ಮೇಲೆ ಓದಲಾದ ಪತ್ರ ದಿನಾಂಕ: 25.10.2005ರಲ್ಲಿ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು, ಇವರು ದಿನಾಂಕ: 30.11.2005ರಂದು 58 ವರ್ಷಗಳ ವಯೋಮಿತಿಯನ್ನು ಪೂರೈಸಲಿರುವ ಶ್ರೀ ಕೆ.ಎಂ. ತಮ್ಮಯ್ಯ ಪ್ರಿಸೈಡಿಂಗ್ ಆಫೀಸರ್, 3ನೇ ಅಪರ ಕಾರ್ಮಿಕ ನ್ಯಾಯಾಲಯ, ಬೆಂಗಳೂರು, ಇವರನ್ನು 58 ವರ್ಷಗಳ ನಂತರ 60 ವರ್ಷದವರೆಗೆ ಸೇವೆಯಲ್ಲಿ ಮುಂದುವರೆಸಲು ಸರ್ಕಾರದ ಆದೇಶ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 127 ಸೇಉನ್ಯಾ 2005, ಬೆಂಗಳೂರು, ದಿನಾಂಕ: 26ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಕೆ.ಎಂ. ತಮ್ಮಯ್ಯ, ಪ್ರಿಸೈಡಿಂಗ್ ಆಫೀಸರ್, 3ನೇ ಅಪರ ಕಾರ್ಮಿಕ ನ್ಯಾಯಾಲಯ, ಬೆಂಗಳೂರು, ಇವರು ದಿನಾಂಕ: 30.11.2005ರಂದು 58 ವರ್ಷಗಳ ವಯೋಮಿತಿ ಪೂರೈಸಿದ ನಂತರವೂ ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 95(ಎ) ರನ್ವಯ 60 ವರ್ಷಗಳ ವಯೋಮಿತಿವರೆಗೆ ಸೇವೆಯಲ್ಲಿ ಮುಂದುವರೆಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್.1651

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಜಿ.ಎಂ. ಯಾತನೂರ, ಡಿವೈಎಸ್‌ಪಿ, ಗುಲ್ಬರ್ಗಾ ಇವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬಿ/5/38/2002-03, ದಿನಾಂಕ: 26.10.2004.
2. ಅರ್ಜಿದಾರರ ಪರೀಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 17.11.2004.
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ/5/38/2002-03, ದಿನಾಂಕ: 05.01.2005.
4. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ/ 160/ ಸಿಎನ್‌ಎಸ್/ 04 ದಿನಾಂಕ: 27.04.2005 ಮತ್ತು 15.11.2005.

**ಪ್ರಸ್ತಾವನೆ:**

ಶ್ರೀ ಜಿ.ಎಂ. ಯಾತನೂರ ಡಿವೈಎಸ್‌ಪಿ (ವಿಜಿಲೆನ್ಸ್) ಗುಲ್ಬರ್ಗಾ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7 ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

"ನೀವು ಹುಮನಾಬಾದ್ ಉಪ ವಿಭಾಗದಲ್ಲಿ ಡಿವೈಎಸ್‌ಪಿ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ನ್ಯಾಯಾಲಯದ ಆದೇಶದ ಮೇರೆಗೆ ದಾಖಲಾದ ಹುಮನಾಬಾದ್ ಪೊಲೀಸ್ ಠಾಣೆ ಗುನ್ಹೆ ಸಂಖ್ಯೆ: 197/2001 ಕಲಂ 352, 504 ಎಪಿಸಿ ಪ್ರಕರಣದಲ್ಲಿ ತನಿಖಾಧಿಕಾರಿಯಾಗಿದ್ದು, ಸದರಿ ಪ್ರಕರಣದ ತನಿಖೆ ವಿಳಂಬವಾದರೂ, ತನಿಖೆ ಮುಂದುವರಿಸಲು ಮೇಲಾಧಿಕಾರಿಗಳ ಅನುಮತಿಯನ್ನು ಪಡೆಯದೆ, ಪ್ರಕರಣದ ಆರೋಪಿತರಾದ ಶ್ರೀ ಜಿ.ಆರ್.ದೇಸಾಯಿ, ಹುಮನಾಬಾದ್ ವೃತ್ತ ನಿರೀಕ್ಷಕರ ವಿರುದ್ಧ ತನಿಖೆ ಕೈಗೊಳ್ಳುವ ಬಗ್ಗೆ ಮೇಲಾಧಿಕಾರಿಯಿಂದ ಅಥವಾ ಸರ್ಕಾರದಿಂದ ಅನುಮತಿ ಪಡೆಯದೆ ಹುರುಳಿಲ್ಲದೆ ತನಿಖೆ ಕೈಗೊಂಡು, ಸದರಿ ವೃತ್ತ ನಿರೀಕ್ಷಕರನ್ನು ಪರಾರಿ ಆರೋಪಿ ಎಂದು ದೋಷಾರೋಪಣೆ ಪಟ್ಟಿಯಲ್ಲಿ ತಿಳಿಸಿದ್ದು, ಸಹಾಯಕ ಸರ್ಕಾರಿ ಅಭಿಯೋಜಕರ ಪರಿಶೀಲನೆಯಿಂದ ದೋಷಾರೋಪಣೆಯಲ್ಲಿನ ನ್ಯೂನತೆಗಳ ಬಗ್ಗೆ ಅಭಿಯೋಜಕರು ಮಾಡಿರುವ ಷರಾವನ್ನು ಅನುಸರಿಸದೆ, ನೇರವಾಗಿ ದೋಷಪೂರಿತ ದೋಷಾರೋಪಣಾ ಪಟ್ಟಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿರುತ್ತೀರಿ. ಅಲ್ಲದೆ, ವರ್ಗಾವಣೆಯಿಂದ ಹುಮನಾಬಾದ್ ಉಪ ವಿಭಾಗದ ಪ್ರಭಾರವನ್ನು ದಿನಾಂಕ:13.07.2002ರಂದು ನೀವು ಬೇರೆಯವರಿಗೆ ವಹಿಸಿಕೊಟ್ಟಿದ್ದು, ಆದರೆ, ಈ ಪ್ರಕರಣದ ಕಡತವನ್ನು ನಿಮ್ಮಲ್ಲಿಯೇ ಇಟ್ಟುಕೊಂಡು, ದಿನಾಂಕ: 15.07.2002ರಲ್ಲಿ ದೋಷಪೂರಿತ ದೋಷಾರೋಪಣಾ ಪಟ್ಟಿಯನ್ನು ನೇರವಾಗಿ ನ್ಯಾಯಾಲಯಕ್ಕೆ ಸಲ್ಲಿಸಿ, ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಅಧಿಕಾರ ದುರುಪಯೋಗವನ್ನು ತೋರಿಸಿರುತ್ತೀರಿ".

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ ಅರ್ಜಿದಾರರ ಲಿಖಿತ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 26.10.2004ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆ ಆಗದಂತೆ ಎರಡು ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ಮೇಲಿನ ಆಪಾದನೆ ಗಂಭೀರ ಸ್ವರೂಪದ್ದಾಗಿಲ್ಲದ್ದರೂ, ಅವರಿಗೆ ಲಘು ಶಿಕ್ಷೆ ವಿಧಿಸಿದ್ದು, ಅರ್ಜಿದಾರರು ಯಾವುದೇ ರೀತಿಯ ಆರ್ಥಿಕ ವ್ಯಯ ಉಂಟು ಮಾಡಿಲ್ಲದಿರುವುದನ್ನು ಮನಗಂಡು ಶಿಸ್ತು ಪ್ರಾಧಿಕಾರಿ ಅರ್ಜಿದಾರರಿಗೆ ವಿಧಿಸಿರುವ ದಂಡನಾ ಆದೇಶವನ್ನು ರದ್ದುಪಡಿಸಲು ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ: 15.11.2005ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ತಿಳಿಸಿದ ಹಿನ್ನೆಲೆಯಲ್ಲಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 234 ಪೊಸಿಅ 2004, ಬೆಂಗಳೂರು, ದಿನಾಂಕ: 25ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ: 26.10.2004ರ ಶಿಸ್ತು ಪ್ರಾಧಿಕಾರಿ ಹೊರಡಿಸಿರುವ ದಂಡನಾ ಆದೇಶವನ್ನು ರದ್ದುಪಡಿಸಿ, ಶ್ರೀ ಜಿ.ಎಂ. ಯಾತನೂರ ಡಿವೈಎಸ್‌ಪಿ, (ವಿಜಿಲೆನ್ಸ್) ಗುಲ್ಬರ್ಗಾ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ: 17.11.2004ರ ಮೇಲ್ಮನವಿಯನ್ನು ಪುರಸ್ಕರಿಸಿ, ಅವರ ವಾರ್ಷಿಕ ವೇತನ ಬಡ್ತಿಗಳನ್ನು ಸಕ್ರಮಗೊಳಿಸಲು ಆದೇಶಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ: 15.11.2005ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್.1652

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ :** ಕುವೆಂಪು ಭಾಷಾ ಭಾರತಿ ಕೇಂದ್ರದ ಅಡಿಯಲ್ಲಿ ರಚಿಸಲಾಗಿರುವ ಅನುವಾದ ಅಕಾಡೆಮಿಗೆ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಂಕಇ 271 ಕಸಧ 2005, ದಿನಾಂಕ: 27.07.2005.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂಕಇ 271 ಕಸಧ 2005, ದಿನಾಂಕ: 27.09.2005.
3. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರ ಪ.ಸಂ.ಕಸನಿ/48/ಅ.ಸಾ.ಅ./05-06, ದಿನಾಂಕ: 12.07.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಅಧಿಸೂಚನೆಯಲ್ಲಿ ಕುವೆಂಪು ಭಾಷಾ ಭಾರತಿ ಕೇಂದ್ರ ಸ್ಥಾಪನೆಗೆ ಅನುಮೋದನೆ ನೀಡಿ ರೂ.50.00 ಲಕ್ಷಗಳನ್ನು ಮಂಜೂರು ಮಾಡಲಾಗಿದೆ. ಮೇಲೆ ಓದಲಾದ (2)ರ ಅಧಿಸೂಚನೆಯಲ್ಲಿ ಕುವೆಂಪು ಭಾಷಾ ಭಾರತಿ ಕೇಂದ್ರದ ಅಡಿಯಲ್ಲಿ ಅನುವಾದ ಅಕಾಡೆಮಿಯನ್ನು ರಚಿಸುವ ಸಂಬಂಧದಲ್ಲಿ ಡಾ: ಪ್ರಧಾನ ಗುರುದತ್ ಅವರ ಅಧ್ಯಕ್ಷತೆಯಲ್ಲಿ ಸದಸ್ಯರನ್ನು ನಾಮ ನಿರ್ದೇಶನ ಮಾಡಲಾಗಿದೆ. ಮೇಲೆ ಓದಲಾದ (3)ರ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರು ಕುವೆಂಪು ಭಾಷಾ ಭಾರತಿ ಕೇಂದ್ರದಲ್ಲಿ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಶೀಘ್ರವೇ ಪ್ರಾರಂಭಿಸಬೇಕಾಗಿದೆಯೆಂದು, ಈ ಅಕಾಡೆಮಿಗೆ ಸಧ್ಯಕ್ಕೆ ಕನ್ನಡ ಭವನದಲ್ಲಿ ಸ್ಥಳಾವಕಾಶ ಕಲ್ಪಿಸಿಕೊಡಲಾಗಿದೆಯೆಂದು, ಉದ್ದೇಶಿತ ಕಲಾಗ್ರಾಮದ ಪಕ್ಕದಲ್ಲಿ ನಿರ್ಮಿಸಲಾಗುವ ಭಾಷಾ ಭಾರತಿ ಕೇಂದ್ರ ಕಟ್ಟಡಕ್ಕೆ ಸ್ಥಳಾಂತರಿಸಲಾಗುವುದೆಂದು, ಒಟ್ಟು ಸಿಬ್ಬಂದಿಯ ಪೈಕಿ ಸಧ್ಯಕ್ಕೆ ಕನ್ನಡ ಭವನದಲ್ಲಿ ಅನುವಾದ ಸಾಹಿತ್ಯ ಅಕಾಡೆಮಿ ಅಸ್ತಿತ್ವಕ್ಕೆ ಬಂದು ಕೆಲಸ ನಿರ್ವಹಿಸಲು ಕಛೇರಿಗೆ ಅಗತ್ಯವಾದ ಹುದ್ದೆಗಳನ್ನು ಸೃಜಿಸಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿರುವ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 271 ಕಸಧ 2005 (ಭಾಗ), ಬೆಂಗಳೂರು, ದಿನಾಂಕ: 18ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕುವೆಂಪು ಭಾಷಾ ಭಾರತಿ ಕೇಂದ್ರದ ಅಡಿಯಲ್ಲಿ ರಚಿಸಲಾಗಿರುವ ಅನುವಾದ ಅಕಾಡೆಮಿಯ ಕಛೇರಿಗೆ ಈ ಕೆಳಗೆ ಕಾಣಿಸಿದಂತೆ ಹುದ್ದೆಗಳನ್ನು ಸೃಜಿಸಲಾಗಿದೆ (ವಿವರಣಾ ಪಟ್ಟಿಯನ್ನು ಅನುಬಂಧಿಸಿದೆ).

| ಹುದ್ದೆಗಳ ಹೆಸರು | ಹುದ್ದೆಗಳ ಸಂಖ್ಯೆ | ಹುದ್ದೆಗಳನ್ನು ಭರ್ತಿ ಮಾಡಬೇಕಾದ ವಿಧಾನ |
|---|---|---|
| 1. ರಿಜಿಸ್ಟ್ರಾರ್ (ಬಿ ದರ್ಜೆ ಅಧಿಕಾರಿ) | 1 | ಈ ಹುದ್ದೆಗಳನ್ನು ನಿಯೋಜನೆ ಮೇಲೆ ಭರ್ತಿ ಮಾಡುವುದು. |
| 2. ಕಛೇರಿ ಅಧೀಕ್ಷಕರು (ಶಿರಸ್ತೆದಾರ ಶ್ರೇಣಿ) | 1 | |
| 3. ಶೀಘ್ರಲಿಪಿಗಾರ ಕಂ ಕಂಪ್ಯೂಟರ್ ಆಪರೇಟರ್ | 1 | |
| 4. ಪ್ರಥಮ ದರ್ಜೆ ಸಹಾಯಕ | 1 | |
| 5. ದಲಾಯತ್ | 2 | |
| ಒಟ್ಟು | 6 | |

ಈ ಹುದ್ದೆಗಳನ್ನು ನಿಯೋಜನೆ ಮೇಲೆ ಭರ್ತಿ ಮಾಡಲು ಅನುಮತಿ ನೀಡಲಾಗಿದೆ ಹಾಗೂ ಪ್ರಸಕ್ತ ಸಾಲಿನಲ್ಲಿ ಸದರಿ ಹುದ್ದೆಗಳ ವೇತನ ಮತ್ತು ಆಡಳಿತಾತ್ಮಕ ವೆಚ್ಚವನ್ನು 5 ತಿಂಗಳಿಗೆ (ನವೆಂಬರ್ 2005 ರಿಂದ ಮಾರ್ಚ್ 2006ರವರೆಗೆ) ಲೆಕ್ಕ ಹಾಕಿ, ಆ ವೆಚ್ಚವನ್ನು ಇಲಾಖೆಯ ಒಟ್ಟಾರೆ ಅನುದಾನದ ಉಳಿತಾಯದಲ್ಲಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1741 ವೆಚ್ಚ-5/ 2005, ದಿನಾಂಕ:07.11.2005ರಲ್ಲಿ ನೀಡಿದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**

ಪಿ.ಆರ್.1653 ಪೀಠಾಧಿಕಾರಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## FOREST, ENVIRONMENT AND ECOLOGY SECRETARIAT

**Sub :** J.B.I.C. Phase II- Assisted Karnataka Forest Management & Bio-diversity Conservation Project-Sanction of the annual Plan of Operation for the year 2005-06.

**Read :**
1. G.O. No. FEE 279 FAP 2003, Dated: 23.03.2005.
2. The Chief Conservator of Forests (SF), Bangalore letter No: A1-KSFMBC/SEC/CR-8/2005-06, Dated: 05.09.2005.

**Preamble:**

In G.O. referred at (1) above, Karnataka Sustainable Forest Management & Bio-diversity Conservation (KSFMBC) Project has been approved for implementation from 2012-1013 with a total outlay of Rs.745.00 crores in the State over a period of 8 years, with certain conditions.

In the letter (2) read above, the Chief Conservator of Forests (SF), Bangalore has informed that the Empowered Committee for according sanctions under the J.B.I.C.-Phase II- Assisted Karnataka Forest Management & Bio-diversity Conservation Project has in its first meeting held on 24.08.2005 approved the Annual Plan of operations under the project for the year 2005-06 with an outlay of Rs. 77.20 crores as detailed in Annexure and has sought issue of Government Order in the matter. Hence the order.

**Government Order No. FEE 162 FAP 2005, Bangalore, Dated: 12th September, 2005**

Sanction is hereby accorded for the Annual Plan of Operations for the year 2005-06 with an outlay of Rs.77.20 crores (Rupees Seventy Seven crores & twenty lakhs only) as detailed in the Annexure to this Government Order, under the J.B.I.C.-Phase II- Assisted Karnataka Forest Management & Bio-diversity Conservation Project.

The above sanctions are in accordance with the decision of the Ist meeting of the Empowered Committee held on 24.08.2005.

By Order and in the Name of the Governor of Karnataka,

**S.R. VATSALA**

Under Secretary to Government (2),
Forest, Environment & Ecology Department.

**Annexure to G.O. No.FEE 162 FAP 2005, Bangalore, Dated: 12.09.2005**
**B.I.C.-Phase II- Assisted Karnataka Forest Management & Bio-diversity Conservation Project-ID-P163-Programme of works for the year 2005-06**

**(Rs. in crores)**

| Sl.No. | Item of Works | Physical Target | Financial Target |
|---|---|---|---|
| 1. | **AFFORESTATION:** | | |
| Model-1 | Ecological restoration through natural regeneration | 10000 ha. | 5.842 |
| Model-4 | Plantations for fuel wood and small timber production | 14000 ha. | 19.611 |
| **Model-8** | **Farm Forestry** | | |
| 8a | Raising Demostration Plots | 600 ha. | 0.840 |
| Model-8-b | Seed supply | 100000 Kgs. | 0.250 |
| Model-8-c | Seedlings distribution in Bigger PBs | 200000 Nos. | 0.207 |
| Model-8-d | Seedlings distribution in Small PBs | 11000000 Nos. | 3.630 |
| | Workshops/ Discussion/ Seminar on Farm Forestry, Tree based agriculture | 20 Nos. | 0.090 |
| | Publication of 1caflcts, pamplcts, posters and documentation of success stores etc. | 7 Nos. | 0.035 |
| | Rewards and incentives for successful farmers | 200 Nos. | 0.021 |
| | Soil Conservation & Water Harvesting Measures | | 3.820 |
| | **Total** | | **34.346** |
| **II.** | **Protected Area Management and Bio-diversity Conservation.** | | |
| a. | New Fireline Formation | 441 Km. | 0.037 |
| b. | Habitat Improvement | 750 ha. | 0.94 |
| a | **Eco-development Works** | | |
| | Vaccination, Fodder Development in the Fringe Villages Alternative Energy Devices, NTFP value addition work. | 133 ha. | 1.337 |
| b | New Elephant Proof Trench (EPT) | 75 Km. | 0.937 |
| c | EPT Maintenance | 80 Km. | 0.160 |
| | **Total** | | **2.565** |
| **III.** | **Joint Forest Plannaing & Management (Participatory Management)** | | |
| 1. | Formation of New VFC's | 300 Nos. | 1.410 |
| 2. | JFPM Facilitators | 60 Nos. | 0.864 |
| 3. | JFPM Co-ordinator | 1 Nos. | 0.060 |
| 4. | Lead NGO Honorarium | 5 Nos. | 0.120 |
| | **Total** | | **2.454** |
| | **Supporting Activities for Forest Management** | | |
| **i.** | **Research** | | |
| | **Equipments** | | |
| a. | Mist chambers (Rate/ Unit) | 2 Nos | 0.200 |
| b. | Seed Development Units | 8 Nos. | 0.080 |
| | **Operation Cost** | | |
| a. | Seed Orchards (Rate/ ha.) | 600 ha. | 2.078 |
| b. | Seed Production Areas's (Rate/ ha.) | 400 ha. | 0.800 |
| c. | Clonal Banks (Rate/ ha.) | 40 ha. | 0.323 |
| d. | Clonal Banks (Rate/ ha.) | 40 ha. | 0.157 |
| **ii.** | **Studies** | | |
| a. | Ecological | 2 Nos. | 0.012 |
| b. | Socio-economic | 2 Nos. | 0.004 |
| c. | Silvicultural Research | 10 Nos. | 0.020 |

| Sl.No. | Item of Works | Physical Target | Financial Target |
|---|---|---|---|
| d. | Research Fellowship | 10 Nos. | 0.010 |
| e. | Research (contract) | 10 Nos. | 0.020 |
| **iii.** | **Training** | | |
| a. | VFC & SHG's Members | | |
| i. | 1 Weeks Training | 300 Batch | 3.600 |
| ii. | 2 Weeks Training | 90 Batch | 1.800 |
| iii. | VFC Presidents & Exexutives | 55 Batch | 0.825 |
| b. | NGO's Training | 4 Batch | 0.040 |
| c. | Foresters/ Forest Guards | 30 Batch | 0.600 |
| d. | Range Forest Officers | 30 Batch | 0.600 |
| e. | Officiers (CF/ DCF/ ACF) | 8 Batch | 0.121 |
| f. | Senior Officers outside the State | 160 Nos. | 0.224 |
| | **Total** | | **11.514** |
| **V.** | **Basic Infrastructure Support for field work** | | |
| 1. | Vehicles | 10 Nos. | 0.467 |
| 2. | Computers | 74 Nos. | 0.370 |
| 3. | Telephone | 45 Nos. | 0.044 |
| 4. | Broadband internet/ E-Governance | 7 Nos. | 0.070 |
| 5. | **Buildings** | | |
| | Residential Buildings | 15 Nos. | 0.977 |
| | Non-Residential Buildings | 6 Nos. | 0.560 |
| 6. | **PMC Secretariat** | | |
| a. | CF (PMC) | 1 Nos. | 0.036 |
| b. | DCF (M & E) | 1 Nos. | 0.030 |
| c. | GIS-System Analyst | 1 Nos. | 0.020 |
| d. | MIS-System Analyst | 1 Nos. | 0.024 |
| e. | Data Entry Operators (On Contract) | 2 Nos. | 0.024 |
| f. | Drivers (On Contract) | 2 Nos. | 0.060 |
| 7. | **Work Shops Technical** | | |
| a. | Head Office | 1 Nos. | 0.050 |
| b. | Circles Divisions | 2 Nos. | 0.060 |
| **8.** | **Office Equipment** | | |
| a. | Fax/ Photo copying machines | 4 Nos. | 0.012 |
| b. | Cable Broadhand Internet connection facility service | 2 Nos. | 0.020 |
| c. | Dialup internet connection kit | 18 Nos. | 0.004 |
| | **Total** | | **2.864** |
| **VI.** | **Repair, Maintenance & Office Expenses (RMOE)** | | |
| 1. | Office | 30 Nos. | 0.450 |
| 2. | Fuel | 80 Nos. | 1.200 |
| 3. | Travel Allowances | 40 Nos. | 0.400 |
| 4. | Repairs | 10 Nos. | 0.050 |
| 5. | Building Maintenance | 200 Nos. | 0.600 |
| | **Total** | | **2.700** |
| **VII.** | **Salary of the redeployed staff** | 2053 Nos. | 16.000 |
| | **Grand Total** | | 72.443 |
| | Price Escalation | | 1.430 |
| | Physical Contingency | | 3.328 |
| | **GRAND TOTAL** | | **77.200** |

**S.R. VATSALA**
Under Secretary to Government (2),
Forest, Environment & Ecology Department.

PR-1654

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಮಂಗಳೂರು ಕಂದಾಯ ತಾಲ್ಲೂಕು ಕ್ಷೇತ್ರದ ಶ್ರೀ ಬಿ.ಎಸ್. ಆಚಾರ್ಯ, ನೋಟರಿ ಇವರ ನಿಧನದಿಂದ ಹಾಗೂ ಶ್ರೀ ಮೊಹಮ್ಮದ್ ಇಸ್ಮಾಯಿಲ್, ನೋಟರಿ ಇವರ ರಾಜೀನಾಮೆಯಿಂದ ತೆರವಾದ ನೋಟರಿ ಹುದ್ದೆಗಳಿಗೆ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಪತ್ರ ಲಾ 165 ಎಲ್‌ಸಿಎಲ್ 2005, ದಿನಾಂಕ: 24.06.2005.
2. ಲಾ 105 ಎಲ್‌ಸಿಎಲ್ 2004, ದಿನಾಂಕ: 30.07.2005.
3. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಕ್ಷಿಣ ಕನ್ನಡ- ಮಂಗಳೂರು ರವರ ಪತ್ರ ಸಂಖ್ಯೆ: ಎಡಿಎಂಎನ್-II/ 9398/2005, ದಿನಾಂಕ: 09.09.2005.

**ಪ್ರಸ್ತಾವನೆ:**

ಮೇಲೆ (1) ಮತ್ತು (2) ರಲ್ಲಿ ಕ್ರಮವಾಗಿ ಓದಲಾಗಿರುವ ದಿನಾಂಕ: 24.06.2005ರ ಪತ್ರದಲ್ಲಿ ಶ್ರೀ ಬಿ.ಎಸ್. ಆಚಾರ್ಯ, ನೋಟರಿ, ಮಂಗಳೂರು ಇವರ ನಿಧನದಿಂದ ತೆರವಾದ ನೋಟರಿ ಹುದ್ದೆಗೆ ಹಾಗೂ ದಿನಾಂಕ: 30.07.2005ರ ಪತ್ರದಲ್ಲಿ ಶ್ರೀ ಮೊಹಮ್ಮದ್ ಇಸ್ಮಾಯಿಲ್, ನೋಟರಿ, ಮಂಗಳೂರು ಇವರ ರಾಜೀನಾಮೆಯಿಂದ ತೆರವಾದ ಹುದ್ದೆಗಳಿಗೆ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಸತ್ರ ನ್ಯಾಯಾಧೀಶರು, ದಕ್ಷಿಣ ಕನ್ನಡ ಇವರನ್ನು ಕೋರಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ: 09.09.2005ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಕ್ಷಿಣ ಕನ್ನಡ-ಮಂಗಳೂರು ರವರು ನಿಯಮಾನುಸಾರ ಪರಿಶೀಲಿಸಿ ಮೆಮೋರಿಯಲ್ಸ್‌ಗಳ ಜೊತೆ ನೇಮಕಾತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 165 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 9ನೇ ನವೆಂಬರ್, 2005**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, 1956ರ ನೋಟರಿ ನಿಯಮಗಳ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ಸರ್ಕಾರವು (1952)ರ ನೋಟರಿ ಅಧಿನಿಯಮ ಹಾಗೂ ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ (1) ಶ್ರೀ ಕೆ. ತಾರಾನಾಥ್ ಶೆಟ್ಟಿ, ವಕೀಲರು ಸಮೃದ್ಧಿ, 2ನೇ ಕ್ರಾಸ್, ಚರ್ಚ್ ಕಾಂಪೌಂಡ್, ಕುಲಶೇಖರ್, ಮಂಗಳೂರು ಮತ್ತು (2) ಶ್ರೀ ಐವಾನ್ ಡಿಸೋಜಾ, ವಕೀಲರು, ಲಿಲ್ಲಿ, ಫಾತಿಮಾ ಕಾಲೋನಿ ಎದುರು, ವಾಲನ್‌ಸಿಯಾ ಕಾಕವಾಡಿ, ಮಂಗಳೂರು ಇವರುಗಳನ್ನು ಶ್ರೀ ಬಿ.ಎಸ್. ಆಚಾರ್ಯ, ಇವರ ನಿಧನದಿಂದ ಹಾಗೂ ಶ್ರೀ ಮೊಹಮ್ಮದ್ ಇಸ್ಮಾಯಿಲ್ ಇವರ ರಾಜೀನಾಮೆಯಿಂದ ತೆರವಾದ ಸ್ಥಾನಗಳಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಮಂಗಳೂರು ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

ಮೇಲೆ ಹೆಸರಿಸಲಾಗಿರುವ ವಕೀಲರುಗಳು ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಲೆಕ್ಕ ಶೀರ್ಷಿಕೆಗೆ 0070 ಇತರೆ ಆಡಳಿತಾತ್ಮಕ ಸೇವೆಗಳು -01 ನ್ಯಾಯ ಪರಿಪಾಲನೆ-501-0- ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳಲ್ಲಿ (0070-01-501-0-06) ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ 4ನೇ ಪ್ರಕರಣದಡಿ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಈ ಸಂಬಂಧದ ವೆಚ್ಚವನ್ನು ಶ್ರೀಯುತರೆ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ಶಕುಂತಲ**

ಪಿ.ಆರ್.1655

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ (ಆಡಳಿತ-2).

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಖಾಸಗಿ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳಿಗೆ ಮಾನ್ಯತೆ ಹಾಗೂ ಸಹಾಯಧನ ಮಂಜೂರು ಮಾಡುವ ಬಗ್ಗೆ ನಿಯಮ ತಿದ್ದುಪಡಿ ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಕಇ 103 ಬಿಎಂಎಸ್ 02, ಬೆಂಗಳೂರು, ದಿನಾಂಕ: 30.08.2002.
2. ಆಯುಕ್ತರು, ಹಿಂದುಳಿದ ವರ್ಗಗಳ ಇಲಾಖೆ, ಬೆಂಗಳೂರು ಇವರು ಪತ್ರ ಸಂಖ್ಯೆ: ಹಿಂವನಿ: ವನಿಶಾ-1: ಸಿಆರ್-4:05-06, ದಿನಾಂಕ: 03.06.2005, 24.09.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರ ಆದೇಶದಲ್ಲಿ ಹಿಂದುಳಿದ ವರ್ಗಗಳ ಇಲಾಖೆಯ ಖಾಸಗಿ ಸ್ವಯಂ ಸೇವಾ ಸಂಸ್ಥೆಗಳು ನಡೆಸುತ್ತಿರುವ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳಿಗೆ ಮಾನ್ಯತೆ ಹಾಗೂ ಸಹಾಯಧನ ಮಂಜೂರು ಮಾಡುವ ಹೊಸ ಯೋಜನಾ ಕಾರ್ಯಕ್ರಮಕ್ಕೆ ನಿಯಮಗಳನ್ನು ರಚಿಸಿ ಆದೇಶಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಹಿಂದುಳಿದ ವರ್ಗಗಳ ಇಲಾಖಾ ಆಯುಕ್ತರು, ಪ್ರಸ್ತಾವನೆ ಸಲ್ಲಿಸಿ, ಹಿಂದುಳಿದ ವರ್ಗಗಳ ಇಲಾಖೆಯ ಖಾಸಗಿ ಮೆಟ್ರಿಕ್ ನಂತರ ವಿದ್ಯಾರ್ಥಿನಿಲಯಗಳಿಗೆ ಮಾನ್ಯತೆ ನೀಡುವ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗುತ್ತಿದ್ದು, ಸದರಿ ನಿಯಮಗಳ ಪ್ರಕಾರ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಂದ ಬಂದ ಆಯವ್ಯಯದ ಬಗ್ಗೆ ಪರಿಶೀಲಿಸಿ ಮಾನ್ಯತೆಗಾಗಿ ಸರ್ಕಾರಕ್ಕೆ ಕಳುಹಿಸಲಾಗುತ್ತಿದೆ. ಈಗ 2005-06ನೇ ಸಾಲಿನಿಂದ ಈ ಕಾರ್ಯಕ್ರಮವು ಜಿಲ್ಲಾ ವಲಯಕ್ಕೆ ವರ್ಗಾವಣೆಯಾಗಿರುವುದರಿಂದ ಸದರಿ ಆದೇಶದಲ್ಲಿನ ನಿಯಮಗಳಲ್ಲಿ ಜಿಲ್ಲಾಧಿಕಾರಿಗಳು ಎಂಬುದರ ಬದಲಾಗಿ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಎಂಬುದಾಗಿ ತಿದ್ದುಪಡಿ ಮಾಡಿ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 473 ಬಿಎಂಎಸ್ 2005, ಬೆಂಗಳೂರು, ದಿನಾಂಕ: 17ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿದೆ. ಹಿಂದುಳಿದ ವರ್ಗಗಳ ಇಲಾಖೆಯ ಖಾಸಗಿ ಸ್ವಯಂ ಸೇವಾ ಸಂಸ್ಥೆಯವರು ನಡೆಸುತ್ತಿರುವ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಿಗೆ ಮಾನ್ಯ ಹಾಗೂ ಸಹಾಯಧನ ಮಂಜೂರು ಮಾಡುವ ಕಾರ್ಯಕ್ರಮ ಕುರಿತಂತೆ ಹೊರಡಿಸಲಾಗಿರುವ ಸಕಇ 103 ಬಿಎಂಎಸ್ 2002, ದಿನಾಂಕ: 30.08.2002ರ ಆದೇಶದಲ್ಲಿ ಕಂಡು ಬರುವ "ಜಿಲ್ಲಾಧಿಕಾರಿಗಳು" ಎಂಬ ಪದಗಳನ್ನು "ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು" ಎಂಬುದಾಗಿ ಮಾರ್ಪಾಡು ಮಾಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಪ್ರಾಣದೇವ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್.1656

## ಇಂಧನ ಸಚಿವಾಲಯ

**ವಿಷಯ :** ಮೆ: Monte Carlo Power Private Limited ಕಂಪನಿಗೆ1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ ಆದೇಶ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಡಿಇ 97 ಎನ್‌ಸಿಇ 2002, ದಿನಾಂಕ: 11.07.2002.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ./06/ ಹಿಪ್ಪರಗಿ/ 2005/ 2015 ದಿನಾಂಕ: 05.11.2005.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ: Monte Carlo Power Private Limited ಕಂಪನಿಗೆ ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಹಿಪ್ಪರಗಿ ಗ್ರಾಮದ ಬಳಿ ಹಿಪ್ಪರಗಿ ಬ್ಯಾರೇಜ್‌ಗೆ ಅಡ್ಡಲಾಗಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: Monte Carlo Power Private Limited ಕಂಪನಿಗೆ ಬರಗಾಲದಿಂದ ನೀರಿನ ಹರಿವನ್ನು ಅಳೆಯಲು ಸಾಧ್ಯವಾಗದೆ ಡಿ.ಪಿ.ಆರ್. ಸಿದ್ಧಪಡಿಸುವಲ್ಲಿ ತಡವಾಗಿರುವುದರಿಂದ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಮುಂದಿನ 36 ತಿಂಗಳುಗಳ ಅವಧಿಗೆ ವಿಸ್ತರಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 351 ಎನ್‌ಸಿಇ 2005, ಬೆಂಗಳೂರು, ದಿನಾಂಕ: 23ನೇ ನವೆಂಬರ್, 2005**

ಮೇ: Monte Carlo Power Private Limited ಕಂಪನಿಗೆ ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಹಿಪ್ಪರಗಿ ಗ್ರಾಮದ ಬಳಿ ಹಿಪ್ಪರಗಿ ಬ್ಯಾರೇಜ್‌ಗೆ ಅಡ್ಡಲಾಗಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಮುಂದಿನ 36 ತಿಂಗಳುಗಳಿಗೆ ವಿಸ್ತರಿಸಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್.1657

**ವಿಷಯ :** ಮೆ: Kaltronics Office Automation & Networking (P) Limited ಕಂಪನಿಗೆ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ ಆದೇಶ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಡಿಇ 128 ಎನ್‌ಸಿಇ 2001(1), ದಿನಾಂಕ: 03.11.2001.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ./06/ ಬಲ್ಲುರ/ 2005/ 2012 ದಿನಾಂಕ: 03.11.2005.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ: Kaltronics Office Automation & Networking (P) Limited ಕಂಪನಿಗೆ ಮೈಸೂರು ಜಿಲ್ಲೆಯ ಕೆ.ಆರ್. ನಗರ ತಾಲ್ಲೂಕಿನ ಬಲ್ಲೂರ ಗ್ರಾಮದ ಬಳಿ CMRJ Weir ಗೆ ಅಡ್ಡಲಾಗಿ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: Kaltronics Office Automation & Networking (P) Limited ಕಂಪನಿಗೆ ಬರಗಾಲದಿಂದ ನೀರಿನ ಹರಿವನ್ನು ಅಳೆಯಲು ಸಾಧ್ಯವಾಗದೆ ಡಿ.ಪಿ.ಆರ್. ಸಿದ್ಧಪಡಿಸುವಲ್ಲಿ ತಡವಾಗಿರುವುದರಿಂದ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಮುಂದಿನ 36 ತಿಂಗಳುಗಳ ಅವಧಿಗೆ ವಿಸ್ತರಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 347 ಎನ್‌ಸಿಇ 2005, ಬೆಂಗಳೂರು, ದಿನಾಂಕ: 23ನೇ ನವೆಂಬರ್, 2005**

ಮೇ: Kaltronics Office Automation & Networking (P) Limited ಕಂಪನಿಗೆ ಮೈಸೂರು ಜಿಲ್ಲೆಯ ಕೆ.ಆರ್. ನಗರ ತಾಲ್ಲೂಕಿನ ಬಲ್ಲುರ ಗ್ರಾಮದ ಬಳಿ CMRJ Weir ಗೆ ಅಡ್ಡಲಾಗಿ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಮುಂದಿನ 36 ತಿಂಗಳುಗಳಿಗೆ ವಿಸ್ತರಿಸಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

ಪಿ.ಆರ್.1658

**ವಿಷಯ :** ಮೆ: Kaltronics Office Automation & Networking (P) Limited ಕಂಪನಿಗೆ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ ಆದೇಶ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಡಿಇ 128 ಎನ್‌ಸಿಇ 2001(2), ದಿನಾಂಕ: 03.11.2001.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ./06/ ಮಹದೇವಪುರ/ 2005/ 2013 ದಿನಾಂಕ: 05.11.2005.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ: Kaltronics Office Automation & Networking (P) Limited ಕಂಪನಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಮಹಾದೇವಪುರ ಗ್ರಾಮದ ಬಳಿ R.P. Weir and R.S. Weir ಗೆ ಅಡ್ಡಲಾಗಿ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: Kaltronics Office Automation & Networking (P) Limited ಕಂಪನಿಗೆ ಬರಗಾಲದಿಂದ ನೀರಿನ ಹರಿವನ್ನು ಅಳೆಯಲು ಸಾಧ್ಯವಾಗದೆ ಡಿ.ಪಿ.ಆರ್. ಸಿದ್ಧಪಡಿಸುವಲ್ಲಿ ತಡವಾಗಿರುವುದರಿಂದ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಮುಂದಿನ 36 ತಿಂಗಳುಗಳ ಅವಧಿಗೆ ವಿಸ್ತರಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 348 ಎನ್‌ಸಿಇ 2005, ಬೆಂಗಳೂರು, ದಿನಾಂಕ: 23ನೇ ನವೆಂಬರ್, 2005**

ಮೇ: Kaltronics Office Automation & Networking (P) Limited ಕಂಪನಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಮಹಾದೇವಪುರ ಗ್ರಾಮದ ಬಳಿ R.P. Weir and R.S. Weir ಗೆ ಅಡ್ಡಲಾಗಿ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಮುಂದಿನ 36 ತಿಂಗಳುಗಳಿಗೆ ವಿಸ್ತರಿಸಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

ಪಿ.ಆರ್.1659

**ವಿಷಯ :** ಮೆ: Parpikala Power Pvt. Limited ಕಂಪನಿಗೆ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ ಆದೇಶ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಡಿಇ 130 ಎನ್‌ಸಿಇ 2001(1), ದಿನಾಂಕ: 03.11.2001.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ./06/ ಮಿರ್ಜಾ ವಿಯರ್/ 2005/2017 ದಿನಾಂಕ: 03.11.2005.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ: Parpikala Power Pvt. Limited ಕಂಪನಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಮಿರ್ಜಾ ವಿಯರ್ ಬಳಿ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: Parpikala Power Pvt. Limited ಕಂಪನಿಗೆ ಬರಗಾಲದಿಂದ ನೀರಿನ ಹರಿವನ್ನು ಅಳೆಯಲು ಸಾಧ್ಯವಾಗದೆ ಡಿ.ಪಿ.ಆರ್. ಸಿದ್ಧಪಡಿಸುವಲ್ಲಿ ತಡವಾಗಿರುವುದರಿಂದ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಮುಂದಿನ 36 ತಿಂಗಳುಗಳ ಅವಧಿಗೆ ವಿಸ್ತರಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 349 ಎನ್‌ಸಿಇ 2005, ಬೆಂಗಳೂರು, ದಿನಾಂಕ: 23ನೇ ನವೆಂಬರ್, 2005**

ಮೇ: Parpikala Power Pvt. Limited ಕಂಪನಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಮಿರ್ಜಾ ವಿಯರ್ ಬಳಿ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಮುಂದಿನ 36 ತಿಂಗಳುಗಳಿಗೆ ವಿಸ್ತರಿಸಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್.1660

**ವಿಷಯ :** ಮೆ: Parpikala Power Pvt. Limited ಕಂಪನಿಗೆ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ ಆದೇಶ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಡಿಇ 130 ಎನ್‌ಸಿಇ 2001(2), ದಿನಾಂಕ: 03.11.2002.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ./06/ ಸೀತಾಪುರ/ 2005/2016 ದಿನಾಂಕ: 03.11.2005.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ: Parpikala Power Pvt. Limited ಕಂಪನಿಗೆ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕಿನ ಸೀತಾಪುರ ಹತ್ತಿರ ಚಿಕ್ಕದೇವರಾಜ ಸಾಗರ (Weir) ಒಡ್ಡಿನಲ್ಲಿ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: Parpikala Power Pvt. Limited ಕಂಪನಿಗೆ ಬರಗಾಲದಿಂದ ನೀರಿನ ಹರಿವನ್ನು ಅಳೆಯಲು ಸಾಧ್ಯವಾಗದೆ ಡಿ.ಪಿ.ಆರ್. ಸಿದ್ಧಪಡಿಸುವಲ್ಲಿ ತಡವಾಗಿರುವುದರಿಂದ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಮುಂದಿನ 36 ತಿಂಗಳುಗಳ ಅವಧಿಗೆ ವಿಸ್ತರಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 350 ಎನ್‌ಸಿಇ 2005, ಬೆಂಗಳೂರು, ದಿನಾಂಕ: 23ನೇ ನವೆಂಬರ್, 2005**

ಮೇ: Parpikala Power Pvt. Limited ಕಂಪನಿಗೆ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕಿನ ಸೀತಾಪುರ ಹತ್ತಿರ ಚಿಕ್ಕದೇವರಾಜ ಸಾಗರ (Weir) ಒಡ್ಡಿನಲ್ಲಿ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಮುಂದಿನ 36 ತಿಂಗಳುಗಳಿಗೆ ವಿಸ್ತರಿಸಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್.1661

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ :** ಶ್ರೀ ಹೆಚ್. ಜನಾರ್ಧನ, ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗದ ಬೀದರ್ ಇವರ ವಿರುದ್ಧ ಟ್ರಾಪ್ ಪ್ರಕರಣ- ವಿಚಾರಣೆ ಬಾಕಿ ಇಟ್ಟು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ ಆದೇಶ.

**ಓದಲಾಗಿದೆ :** ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಲ್‌ಒಕೆ/ ಐಎನ್ ವಿ(ಜಿ)/ ಜಿಎಲ್ ಬಿ-11/ ಸಿಆರ್-1/2005/ ಬೀದರ್, ದಿನಾಂಕ: 28.10.2005.

**ಆದೇಶ ಸಂಖ್ಯೆ: ಗ್ರಾಅಪ 30 ಇಎನ್‌ಕ್ಯೂ 05, ಬೆಂಗಳೂರು, ದಿನಾಂಕ: 22ನೇ ನವೆಂಬರ್, 2005**

ಶ್ರೀ ಹೆಚ್. ಜನಾರ್ಧನ, ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬೀದರ್, ಇವರು ದಿನಾಂಕ: 05.10.2005ರಂದು ಗುತ್ತಿಗೆದಾರರಾದ ಶ್ರೀ ನೀಲಕಂಠ, ಠಾಣಕುಶನೂರು ವಾಸಿ, ಔರಾದ್ ತಾಲ್ಲೂಕು, ಬೀದರ್ ಜಿಲ್ಲೆ ಇವರು ಮಾಡಿಸಿದ ಕಾಮಗಾರಿ ಬಾಬ್ತು ರೂ.5,87,153-00 ಗಳ ಬಾಕಿ ಬಿಲ್‌ನ್ನು ಪಾಸ್ ಮಾಡಿ ಅವರಿಗೆ ಚೆಕ್ ನೀಡಲು ರೂ.10,000-00 ಗಳ ಅಕ್ರಮ ಸಂಭಾವನೆಯನ್ನು ಒತ್ತಾಯಿಸಿ ಪಡೆಯುತ್ತಿದ್ದ ಸಮಯದಲ್ಲಿ ಬೀದರ್ ಲೋಕಾಯುಕ್ತದ ಪೊಲೀಸ್ ಅಧಿಕಾರಿಗಳು ಬೀಸಿದ ಬಲೆಗೆ ಸಿಕ್ಕಿಹಾಕಿಕೊಂಡಿರುತ್ತಾರೆಂದು, ಸದರಿ ಅಧಿಕಾರಿಯನ್ನು ಅಂದೇ ದಸ್ತಗಿರಿ ಮಾಡಿ ಜಾಮೀನಿನ ಮೇಲೆ ಬಿಡುಗಡೆ ಮಾಡಲಾಗಿದೆ ಎಂದು ಇವರ ಮೇಲಿನ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ ಎಂದು ಮೇಲೆ ಓದಲಾದ ದಿನಾಂಕ: 28.10.2005ರ ಪತ್ರದಲ್ಲಿ ಲೋಕಾಯುಕ್ತದ ಅಪರ ಪೊಲೀಸ್ ಮಹಾ ನಿರ್ದೇಶಕರು ವರದಿ ಮಾಡಿರುತ್ತಾರೆ.

ಶ್ರೀ ಹೆಚ್. ಜನಾರ್ಧನ, ಇವರು ಮೇಲಿನಂತೆ ಅಕ್ರಮ ಸಂಭಾವನೆ ಸ್ವೀಕರಿಸುವ ಮೂಲಕ ಭ್ರಷ್ಟಾಚಾರ ನಿರೋದ ಕಾಯ್ದೆ 1988ರ ಕಲಂ-7, 13(1) (ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರಲ್ಲಿನ ಶಿಕ್ಷಾರ್ಹ ಅಪರಾದವೆಸಗಿದ್ದು, ಅದಕ್ಕಾಗಿ ಇವರ ಮೇಲೆ ಬೀದರ್ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 1/2005ನ್ನು ದಾಖಲಿಸಲಾಗಿದೆ ಎಂದು ವರದಿ ಮಾಡಿರುತ್ತಾರೆ.

ಲೋಕಾಯುಕ್ತದ ಅಪರ ಪೊಲೀಸ್ ಮಹಾ ನಿರ್ದೇಶಕರು ಮೇಲೆ ಹೇಳಿರುವ ತಮ್ಮ ಪತ್ರದಲ್ಲಿ ಮಾಡಿರುವ ವರದಿಯನ್ನು ಪರಿಶೀಲಿಸಲಾಗಿ ಶ್ರೀ ಹೆಚ್. ಜನಾರ್ಧನ, ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಬೀದರ್, ಇವರು ಮೇಲೆ ಹೇಳಿದ ಅಕ್ರಮ ಸಂಭಾವನೆ ಸ್ವೀಕರಿಸುವ ಕ್ರಿಮಿನಲ್ ಅಪರಾದವನ್ನು ಎಸಗಿದ್ದಾರೆಂದು ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಸದರಿ ಕ್ರಿಮಿನಲ್ ಆರೋಪಗಳು ಶ್ರೀ ಹೆಚ್. ಜನಾರ್ಧನ ಇವರು ಇರುವ ಹುದ್ದೆಯಲ್ಲಿನ ಕರ್ತವ್ಯ ನಿರ್ವಹಣೆಗೆ ಸಂಬಂಧಿಸಿರುವುದರಿಂದಲೂ ಮತ್ತು ಅವು ಅವರ ಕರ್ತವ್ಯ ನಿರ್ವಹಣೆಯಲ್ಲಿ ಅವರನ್ನು ಇಕ್ಕಟ್ಟಿಗೆ ಸಿಕ್ಕಿಸಿರುವುಂತವುಗಳಾಗಿರುವುದರಿಂದಲೂ, ಮತ್ತು ಸದರಿ ಕ್ರಿಮಿನಲ್ ಆರೋಪವು ನೈತಿಕ ದುರಾಚಾರವನ್ನು ಒಳಗೊಂಡಿರುವುದರಿಂದ ವಿಷಯ, ಸಂದರ್ಭ, ಸನ್ನಿವೇಶಗಳನ್ನು ಮತ್ತು ಒದಗಿಬಂದ ದಾಖಲೆಗಳನ್ನು ಪರಿಗಣಿಸಲಾಗಿ ಶ್ರೀ ಹೆಚ್. ಜನಾರ್ಧನ ರವರನ್ನು ಅಮಾನತ್ತಿನಲ್ಲಿಡುವುದು ಅಪೇಕ್ಷಣೀಯವೆಂದು ಸರ್ಕಾರವು ಅಭಿಪ್ರಾಯಪಟ್ಟಿರುತ್ತದೆ.

ಆದ್ದರಿಂದ, ಈಗ ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 10ನೇ ನಿಯಮದ 1(ಎ) ಉಪ-ನಿಯಮದಡಿ ಪ್ರದತ್ತವಾದ ಅಧಿಕಾರದನ್ವಯ ಸರ್ಕಾರವು ಶ್ರೀ ಹೆಚ್. ಜನಾರ್ಧನ, ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬೀದರ್ ಇವರ ಮೇಲಿನ ಇಲಾಖಾ ವಿಚಾರಣೆ/ ಕ್ರಿಮಿನಲ್ ಮೊಕದ್ದಮೆಯನ್ನು ಬಾಕಿ ಇಟ್ಟು ಇವರನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಟ್ಟು ಆದೇಶಿಸಿದೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಹೆಚ್. ಜನಾರ್ಧನ, ಕಾರ್ಯಪಾಲಕ ಇಂಜಿನಿಯರ್, ಇವರಿಗೆ ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಸಂದಾಯ ಮಾಡತಕ್ಕದ್ದು.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಹೆಚ್. ಜನಾರ್ಧನ, ಕಾರ್ಯಪಾಲಕ ಇಂಜಿನಿಯರ್ ಇವರ ಲೀನ್‌ನ್ನು ಶ್ರೀ ಎಂ.ಎನ್. ಕೃಷ್ಣಮೂರ್ತಿ, ಇವರ ಸೇವೆಯನ್ನು ಕೇಂದ್ರ ಸರ್ಕಾರಕ್ಕೆ ಹಿಂದಿರುಗಿಸಿದ್ದರಿಂದ ಖಾಲಿ ಇರುವ ಉಪ ನಿರ್ದೇಶಕರು, ಮಾನವ ಸಂಪನ್ಮೂಲ ಅಭಿವೃದ್ಧಿ ಕೋಶ, ಪಂಚಾಯತ್‌ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು, ಈ ಹುದ್ದೆ ಎದುರು ಪರಿಗಣಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್.1662

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ :** ಕಾಲೇಜು ಶಿಕ್ಷಣ ಆಯುಕ್ತರ ಕಛೇರಿಯಲ್ಲಿ, ಯುಜಿಸಿ ಕಾರ್ಯಗಳು ಹಾಗೂ ನ್ಯಾಕ್ ಮೌಲ್ಯ ಮಾಪನ ಕಾರ್ಯಗಳ ಉಸ್ತುವಾರಿಗಾಗಿ ಡಾ: ವೈ.ಎಂ. ಜಯರಾಜು, ಕಾಲೇಜು ಅಭಿವೃದ್ಧಿ ಮಂಡಳಿಯ ನಿರ್ದೇಶಕರು, ಗುಲ್ಬರ್ಗಾ ವಿಶ್ವವಿದ್ಯಾಲಯ, ಅವರನ್ನು ಅನ್ಯಕಾರ್ಯದ ನಿಮಿತ್ತ ಮಾಡಲಾಗಿದ್ದ ನೇಮಕಾತಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಕಾಲೇಜು ಶಿಕ್ಷಣ ಆಯುಕ್ತರ ಅರೆ ಸರ್ಕಾರಿ ಪತ್ರ ಸಂಖ್ಯೆ: ಕಾಶಿಆ:ಆಆಶಾ:ಎಸ್.ಎಲ್.ಎಸ್:49:2003 ದಿನಾಂಕ: 21.07.2003.
2. ಗುಲ್ಬರ್ಗಾ ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ರವರ ಪತ್ರ ಸಂಖ್ಯೆ:GUG/RPS/CCE/2003-04/19 ದಿನಾಂಕ: 21.06.2003.
3. ಸರ್ಕಾರಿ ಆದೇಶ ಸಂಖ್ಯೆ: ಇಡಿ 156 ಡಿಸಿಇ 2003 ದಿನಾಂಕ: 23.08.03.
4. ಅರೆ ಸರ್ಕಾರಿ ಪತ್ರ ಸಂಖ್ಯೆ: ಕಾಶಿಇ 05/ ಇಪಿಆರ್/ 2002 ಸಿವಿ-1, ದಿನಾಂಕ:10.10.2005.

**ಪ್ರಸ್ತಾವನೆ:**

ಕಾಲೇಜು ಶಿಕ್ಷಣ ಇಲಾಖೆಯ ಸಮಗ್ರ ಗುಣಮಟ್ಟ ನಿರ್ವಹಣೆ ಕಾರ್ಯಯೋಜನೆಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವ ದಿಶೆಯಲ್ಲಿ ಕೆಳ ಕಾಣಿಸಿದ ಕಾರ್ಯಗಳನ್ನು ಕೈಗೊಳ್ಳಲು

1. ನ್ಯಾಕ್ ಜೊತೆ ಮಾಡಿಕೊಂಡಿರುವ ಒಡಂಬಡಿಕೆಯನ್ವಯ ಸ್ಥಾಪಿತವಾಗಿರುವ ರಾಜ್ಯಮಟ್ಟದ ಗುಣಮಟ್ಟದ ಭರವಸೆ ಘಟಕದ (Quality Assurance Cell) ಸಮನ್ವಯ.
2. ಯು.ಜಿ.ಸಿ. ನಿಗದಿಪಡಿಸಿದ ಮಾನದಂಡ: ಸೇವಾ ನಿಯಮಗಳ ಅನುಷ್ಠಾನ.
3. ಹೆಚ್ಚಿನ ಸರ್ಕಾರಿ ಕಾಲೇಜುಗಳನ್ನು ಯು.ಜಿ.ಸಿ.ಯ 10ನೇ ಯೋಜನೆ ಅಡಿ ಸಹಾಯಧನದ ವ್ಯಾಪ್ತಿಗೆ ಒಳಪಡಿಸುವುದು ಮತ್ತು ಸಂಶೋಧನೆಯ ಯೋಜನೆಗಳ ಪ್ರಸ್ತಾವನೆಗಳ ಅಧ್ಯಯನ ಹಾಗೂ ಸಮನ್ವಯದ ಕಾರ್ಯಗಳು.
4. ಕಾಲೇಜು ಮಟ್ಟದಲ್ಲಿ ಪರೀಕ್ಷಾ: ಮೌಲ್ಯಮಾಪನ ವ್ಯವಸ್ಥೆಯ ಸುಧಾರಣೆಗಳ ಅಧ್ಯಯನ.
5. ರಾಜ್ಯದ ಸರ್ಕಾರಿ ಕಾಲೇಜುಗಳನ್ನು ವಿಶ್ವವಿದ್ಯಾಲಯಗಳ ಶಾಶ್ವತ ಸಂಯೋಜನೆಗೆ ಒಳಪಡಿಸುವುದು.
6. ಸರ್ಕಾರಿ ಹಾಗೂ ಅನುದಾನಿತ ಕಾಲೇಜುಗಳ ಅಕಾಡೆಮಿಕ್ ಆಡಿಟಿಂಗ್.
7. ಸ್ವಾಯತ್ತ ಕಾಲೇಜುಗಳ ಸ್ಥಾಪನೆಯ ಪ್ರಸ್ತಾವನೆಗಳ ಅಧ್ಯಯನ ಹಾಗೂ ವರದಿ ತಯಾರಿಸುವುದು.
8. ಕಾಲೇಜು ಮಟ್ಟದಲ್ಲಿ ಗುಣಮಟ್ಟ ಕೇಂದ್ರಗಳನ್ನು (Quality Circles) ರಚಿಸಿ: ಅವುಗಳ ಮೂಲಕ ಪಠ್ಯ ಮತ್ತು ಪಠ್ಯೇತರ ಚಟುವಟಿಕೆಗಳಲ್ಲಿ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ನೀಡುವುದು.
9. ತರಬೇತಿ ಮತ್ತು ಕಾರ್ಯಾಗಾರಗಳನ್ನು ಏರ್ಪಡಿಸುವುದು.

ಗುಲ್ಬರ್ಗಾ ವಿಶ್ವವಿದ್ಯಾಲಯಲದಲಿ ಕಾಲೇಜು ಅಭಿವೃದ್ಧಿ ಮಂಡಳಿಯ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿರುವ ಡಾ: ವೈ.ಎಂ. ಜಯರಾಜು ರವರನ್ನು ಅವರ ಸ್ವಂತ ವೇತನ ಮತ್ತು ಶ್ರೇಣಿಯೊಂದಿಗೆ ತಾತ್ಕಾಲಿಕವಾಗಿ 2 ವರ್ಷಗಳ ಅವಧಿಗೆ ಆಯುಕ್ತರ ಕಛೇರಿಗೆ ಅನ್ಯ ಕಾರ್ಯ ನಿಮಿತ್ತ (OOD ಮೇಲೆ) ಪಡೆಯಲು ಆಯುಕ್ತರು ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ: 21.07.2003ರ ತಮ್ಮ ಪತ್ರದಲ್ಲಿ ಪ್ರಸ್ತಾಪಿಸಿದ್ದರು.

ಗುಲ್ಬರ್ಗಾ ವಿಶ್ವವಿದ್ಯಾಲಯವು ಡಾ: ವೈ.ಎಂ. ಜಯರಾಜುರವರ ಸೇವೆಯನ್ನು ಕಾಲೇಜು ಶಿಕ್ಷಣ ಇಲಾಖೆಗೆ 2 ವರ್ಷಗಳ ಅವಧಿಗೆ OOD ಮೇಲೆ ಕಳುಹಿಸಿ, ಅವರ ವೇತನ ಹಾಗೂ ಭತ್ಯೆಗಳನ್ನು ವಿಶ್ವವಿದ್ಯಾಲಯವೇ ಭರಿಸಿ ಸಹಕರಿಸಲು ಮೇಲೆ ಉಲ್ಲೇಖ (2)ರಲ್ಲಿ ಓದಲಾದ ದಿನಾಂಕ: 21.06.2003ರ ಪತ್ರದಲ್ಲಿ ತನ್ನ ಒಪ್ಪಿಗೆ ನೀಡಿದೆ.

ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ದಿನಾಂಕ: 23.08.2003ರ ಆದೇಶದಲ್ಲಿ ಡಾ: ವೈ.ಎಂ. ಜಯರಾಜು ಕಾಲೇಜು ಅಭಿವೃದ್ಧಿ ಮಂಡಳಿಯ ನಿರ್ದೇಶಕರು ಗುಲ್ಬರ್ಗಾ ವಿಶ್ವವಿದ್ಯಾಲಯ ಅವರನ್ನು ಅವರದೇ ಸ್ವಂತ ವೇತನ ಹಾಗೂ ಗ್ರೇಡ್‌ನಲ್ಲಿ ಅನ್ಯಕಾರ್ಯ ನಿಮಿತ್ತ (OOD) ತಾತ್ಕಾಲಿಕವಾಗಿ ದಿನಾಂಕ: 23.08.2003 ರಿಂದ 2 ವರ್ಷದ ಅವಧಿಗೆ ಕಾಲೇಜು ಶಿಕ್ಷಣ ಆಯುಕ್ತರ ಕಛೇರಿಯಲ್ಲಿ ನೇಮಿಸಲಾಗಿರುತ್ತದೆ.

ಕ್ರಮಾಂಕ (4)ರಲ್ಲಿ ಓದಲಾದ ಕಾಲೇಜು ಶಿಕ್ಷಣ ಆಯುಕ್ತರ ಪತ್ರದಲ್ಲಿ ಡಾ:ವೈ.ಎಂ. ಜಯರಾಜು ರವರು ವಹಿಸಿದ ಕರ್ತವ್ಯವನ್ನು ಪರಿಣಾಮಕಾರಿಯಾಗಿ ನಿರ್ವಹಿಸುತ್ತಿದ್ದು, ಹಲವಾರು ಕಾರ್ಯಕ್ರಮಗಳು ಪ್ರಗತಿಯಲ್ಲಿದ್ದು ಅವುಗಳ ಅನುಷ್ಠಾನಕ್ಕೆ ಸದರಿಯವರ ಸೇವೆಯು ಅತ್ಯಗತ್ಯವಾಗಿರುವುದರಿಂದ ಅವರ ಸೇವೆಯನ್ನು 2 ವರ್ಷಗಳ ಮಟ್ಟಿಗೆ ಮುಂದುವರೆಸುವಂತೆ ಕೋರಿರುತ್ತಾರೆ.

ಕಾಲೇಜು ಶಿಕ್ಷಣ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 202 ಡಿಸಿಇ 2005, ಬೆಂಗಳೂರು, ದಿನಾಂಕ: 22ನೇ ನವೆಂಬರ್, 2005**

ಪ್ರಸ್ತಾವನೆ ಭಾಗದಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಡಾ: ವೈ.ಎಂ. ಜಯರಾಜು ಕಾಲೇಜು ಅಭಿವೃದ್ಧಿ ಮಂಡಳಿಯ ನಿರ್ದೇಶಕರು, ಗುಲ್ಬರ್ಗಾ ವಿಶ್ವವಿದ್ಯಾಲಯ ಪ್ರಸ್ತುತ ಅನ್ಯ ಕಾರ್ಯ ನಿಮಿತ್ತ (OOD) ಅವರನ್ನು ಅವರದೇ ಸ್ವಂತ ವೇತನ ಹಾಗೂ ಗ್ರೇಡ್ ನಲ್ಲಿ ತಾತ್ಕಾಲಿಕವಾಗಿ ಮತ್ತೆ ದಿನಾಂಕ: 30.06.2007ರವರೆಗೆ ಮುಂದುವರೆಸಲಾಗಿದೆ. ಎಂದಿನಂತೆ ಪ್ರಸ್ತಾವನೆ ಭಾಗದಲ್ಲಿ ಕ್ರಮ ಸಂಖ್ಯೆ (1) ರಿಂದ (9) ರವರೆಗೆ ಕಾಣಿಸಿರುವ ಕಾರ್ಯಚಟುವಟಿಕೆಗಳನ್ನು ಆಯುಕ್ತರ ನೇರ ಉಸ್ತುವಾರಿಯಲ್ಲಿ ನಿರ್ವಹಿಸತಕ್ಕದ್ದು. ಡಾ: ವೈ.ಎಂ. ಜಯರಾಜು ರವರ ವೇತನ ಹಾಗೂ ಭತ್ಯೆಗಳನ್ನು ಗುಲ್ಬರ್ಗಾ ವಿಶ್ವವಿದ್ಯಾಲಯವೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿ ಜಾಯ್ಸ್**

ಪಿ.ಆರ್.1665

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ವಿಷಯ :** ಶ್ರೀ ಎನ್.ಇ. ರಾಮಪ್ಪ, ಸಹಾಯಕ ಅಧೀಕ್ಷಕರು (ಸ್ವ.ಪ್ರ) ಇವರಿಗೆ 15 ವರ್ಷದ ಸ್ವಯಂಚಾಲಿತ ವಿಶೇಷ ಮುಂಬಡ್ತಿ ಮಂಜೂರು ಮಾಡುವ ಕುರಿತು.

**ಓದಲಾಗಿದೆ :** 1. ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಇಎಸ್‌ಟಿ/ಸಿಆರ್/162/2003, ದಿನಾಂಕ: 07.02.2004 ಮತ್ತು 14.07.2004.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರ ದಿನಾಂಕ: 07.02.2004 ರಲ್ಲಿ ಪೊಲೀಸ್ ಮಹಾ ನಿರ್ದೇಶಕರು ಹಾಗೂ ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ಇವರು ಶ್ರೀ ಎನ್.ಇ. ರಾಮಪ್ಪ, ಚೀಫ್ ಜೈಲರ್, ಸಹಾಯಕ ಅಧೀಕ್ಷಕರು (ಸ್ವ.ಪ್ರ) ಕಾರಾಗೃಹ ಸಿಬ್ಬಂದಿ ತರಬೇತಿ ಸಂಸ್ಥೆ, ಮೈಸೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಇವರು ದಿನಾಂಕ: 21.01.1976ರಂದು ಜೈಲರ್ ಹುದ್ದೆಗೆ ನೇಮಕಗೊಂಡು ದಿನಾಂಕ: 11.05.1983ರಂದು ಚೀಫ್ ಜೈಲರ್ ಹುದ್ದೆಗೆ ಮುಂಬಡ್ತಿ ಹೊಂದಿ ದಿನಾಂಕ: 11.05.1983 ರಿಂದ 11.05.1998ರವರೆಗೆ ಈ ಹುದ್ದೆಯಲ್ಲಿ ಯಾವುದೇ ಬಡ್ತಿ ಪಡೆಯದೆ ಅದೇ ಹುದ್ದೆಯಲ್ಲಿ ಸತತವಾಗಿ 15 ವರ್ಷಗಳ ಕಾಲ ಸೇವೆಯನ್ನು ದಿನಾಂಕ: 10.05.1998ರಂದು ಪೂರ್ಣಗೊಳಿಸಿರುತ್ತಾರೆ. ಶ್ರೀಯುತರು ದಿನಾಂಕ: 11.05.1998ಕ್ಕೆ ಪಡೆದುಕೊಂಡಿರುವ ವೇತನ ಶ್ರೇಣಿಯು ರೂ.1720-2300 ಆಗಿರುತ್ತದೆ. ಈಗ ಪಡೆಯುತ್ತಿರುವ ವೇತನ ಶ್ರೇಣಿಯು ರೂ.5200-125-5700-7200-200-8800-260-9580 ಆಗಿರುತ್ತದೆ.

ಶಿವಮೊಗ್ಗ ಜಿಲ್ಲಾ ಕಾರಾಗೃಹದಲ್ಲಿದ್ದಾಗ ಕೈದಿಗಳ ಪರಾರಿ ಪ್ರಕರಣಕ್ಕೆ ಸಂಬಂಧಿಸಿದ ಇಲಾಖಾ ವಿಚಾರಣೆಯು ಮುಗಿದಿದ್ದು ಇವರನ್ನು ದೋಷಮುಕ್ತರೆಂದು ಪರಿಗಣಿಸಿರುವುದರಿಂದ ಹಾಗೂ 5 ವರ್ಷಗಳ ಅವಧಿಯಲ್ಲಿ ಅಂದರೆ ದಿನಾಂಕ: 10.05.1998ರವರೆಗೆ ಅವರ ಕಾರ್ಯನಿರ್ವಹಣಾ ವರದಿಯಲ್ಲಿ ಯಾವುದೇ ಪ್ರತಿಕೂಲ ಷರಾ ಮತ್ತು ಇವರ ವಿರುದ್ಧ ಯಾವುದೇ ಕ್ರಿಮಿನಲ್ ಮೊಕದ್ದಮೆ ಬಾಕಿ ಇಲ್ಲದಿರುವುದರಿಂದ ನಿಯಮಗಳನ್ವಯ 15 ವರ್ಷಗಳ ಸ್ವಯಂಚಾಲಿತ ವಿಶೇಷ ಮುಂಬಡ್ತಿಯನ್ನು ವೇತನ ಶ್ರೇಣಿ ರೂ. 5575-125-5700-150-7200-00-200-8800-260-10620ರಲ್ಲಿ ಮಂಜೂರು ಮಾಡುವಂತೆ ಕಾರಾಗೃಹಗಳ ಮಹಾ ನಿರೀಕ್ಷಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 50 ಪಿಆರ್‌ಇ 2004, ಬೆಂಗಳೂರು, ದಿನಾಂಕ: 23ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕಾರಾಗೃಹದ ಇಲಾಖೆಯಲ್ಲಿ ಒಂದೇ ಹುದ್ದೆಯಲ್ಲಿ 15 ವರ್ಷಗಳ ಸೇವೆ ಸಲ್ಲಿಸಿರುವ ಶ್ರೀ ಎನ್.ಇ. ರಾಮಪ್ಪ, ಸಹಾಯಕ ಅಧೀಕ್ಷಕರು (ಸ್ವ.ಪ್ರ) ಇವರಿಗೆ ದಿನಾಂಕ: 11.05.1998ರಿಂದ ಅನ್ವಯವಾಗುವಂತೆ 15 ವರ್ಷಗಲ ಸ್ವಯಂಚಾಲಿತ ವಿಶೇಷ ಮುಂಬಡ್ತಿಯನ್ನು ವೇತನ ಶ್ರೇಣಿ ರೂ.5575-10620ರಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 25 ಎಸ್‌ಆರ್‌ಪಿ 91 ದಿನಾಂಕ: 29.10.1991ರಲ್ಲಿನ ಷರತ್ತಿಗೊಳಪಟ್ಟು ಸರ್ಕಾರವು ಮಂಜೂರು ಮಾಡಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಒಇ 36599 ಆಂಆಸ 2005 ದಿನಾಂಕ: 18.07.2005ರಲ್ಲಿ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಕೃಷ್ಣಮೂರ್ತಿ**

ಪಿ.ಆರ್.1671

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಸೆರೆಮನೆ ಮತ್ತು ಸಿನಿಮಾ).

## ಕಾರ್ಮಿಕ ಸಚಿವಾಲಯ

**ವಿಷಯ :** ಉದ್ಯೋಗ ಮತ್ತು ತರಬೇತಿ ಇಲಾಖೆಯ, ಉದ್ಯೋಗ ವಿಭಾಗದ ನೌಕರರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂದಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸೇಇವಿ 2003, ದಿನಾಂಕ: 01.09.2003.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸೇಇವಿ 2003, ದಿನಾಂಕ: 17.05.2004.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಇವಿ 2004 (ಭಾಗ), ದಿನಾಂಕ: 27.05.2005.
4. ಸಂಖ್ಯೆ: ಉತನಿ/ ಉದ್ಯೋಗ/ ಆಡಳಿತ-1ಎ/ ವಿವ-27/2004-05 ದಿನಾಂಕ: 20.09.2005 ಮತ್ತು ದಿನಾಂಕ: 07.11.2005ರ ಪತ್ರ ವ್ಯವಹಾರ.

**ಪ್ರಸ್ತಾವನೆ:**

ರಾಜ್ಯ ಸರ್ಕಾರದ ನೌಕರರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ಪ್ರಕಟಿಸಲಾಗಿದ್ದು ನಂತರ (2)ರ ಆದೇಶದಲ್ಲಿ ಸದರಿ ಆದೇಶಕ್ಕೆ ಕೆಲವು ಮಾರ್ಪಾಡುಗಳನ್ನು ತರಲಾಗಿದೆ. ಮೇಲೆ ಓದಲಾದ (3)ರ ಆದೇಶದಲ್ಲಿ ಆ ಸೌಲಭ್ಯವನ್ನು ದಿನಾಂಕ: 30.11.2005ರವರೆಗೆ ವಿಸ್ತರಿಸಲಾಗಿದೆ. ಆ ಹಿನ್ನೆಲೆಯಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ 5 ಜನ ವಿವಿಧ ವೃಂದದ ನೌಕರರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯ ಸೌಲಭ್ಯ ನೀಡುವ ಕುರಿತಂತೆ ಉದ್ಯೋಗ ಮತ್ತು ತರಬೇತಿ ಇಲಾಖೆಯ ನಿರ್ದೇಶಕರು ಮೇಲೆ ಓದಲಾದ (4)ರ ಪತ್ರಗಳಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 95 ಇಟಿಎಕ್ಸ್ 2005, ಬೆಂಗಳೂರು, ದಿನಾಂಕ: 30ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸನ್ನಿವೇಶಗಳ ಹಿನ್ನೆಲೆಯಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವ ಉದ್ಯೋಗ ಮತ್ತು ತರಬೇತಿ ಇಲಾಖೆಯ ಒಟ್ಟು 5 ನೌಕರರಿಗೆ ಮೇಲೆ ಓದಲಾದ ಸರ್ಕಾರಿ ಆದೇಶ ದಿನಾಂಕ: 01.09.2003, 17.05.2004 ಮತ್ತು 27.05.2005ರಲ್ಲಿ ನಮೂದಿಸಿರುವ ಷರತ್ತುಗಳಿಗೊಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ವಿಶೇಷ ಸ್ವಯಂ ನಿವೃತ್ತಿ ಯೋಜನೆ ಅಡಿ ನಿವೃತ್ತಿ ಹೊಂದಲು ಅನುಮತಿ ನೀಡಲಾಗಿದೆ ಹಾಗೂ ಈ ಆದೇಶದ ದಿನಾಂಕದಿಂದ ಸದರಿ ನೌಕರರು ಹೊಂದಿದ್ದ ಹುದ್ದೆಗಳನ್ನು ರದ್ದುಗೊಳಿಸಲಾಗಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 938 ಸೇನಿಸಿ 2005, ದಿನಾಂಕ: 08.11.2005ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ. ನಾಗರಾಜ**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

**ಅನುಬಂಧ**

**ವಿಶೇಷ ಸ್ವಯಂ ನಿವೃತ್ತಿ ಯೋಜನೆ**

**ಸರ್ಕಾರಿ ಆದೇಶ ಸಂಖ್ಯೆ: ಕಾಇ 95 ಇಟಿಎಕ್ಸ್ 2005 ದಿನಾಂಕ: 30.11.2005**

| ಕ್ರಮ ಸಂಖ್ಯೆ | ಹೆಸರು/ ಪದನಾಮ |
|---|---|
| 1. | ಶ್ರೀಮತಿ ಕೆ. ಯಶೋದಮ್ಮ, ಹಿರಿಯ ಬೆರಳಚ್ಚುಗಾರ್ತಿ |
| 2. | ಶ್ರೀ ಕೆ.ಓ. ಶ್ರೀಪತಿ, ದ್ವಿತೀಯ ದರ್ಜೆ ಸಹಾಯಕ. |
| 3. | ಶ್ರೀ ಮಹಮ್ಮದ್ ಷಫಿಯುಲ್ಲಾ, ದ್ವಿತೀಯ ದರ್ಜೆ ಸಹಾಯಕ. |
| 4. | ಶ್ರೀ ಕೆ. ರಾಜ, ಗ್ರೂಪ್-ಡಿ. |
| 5. | ಶ್ರೀ ಕೆ.ಎಂ. ರಾಮಚಂದ್ರ, ಗ್ರೂಪ್-ಡಿ. |

**ಎಂ.ಪಿ. ನಾಗರಾಜ**
ಪಿ.ಆರ್.1678
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಸಿವಿಲ್ ಜಡ್ಜ್ (ಹಿರಿಯ ವಿಭಾಗ) ನ್ಯಾಯಾಲಯಗಳಲ್ಲಿ ಅಪರ ಸರ್ಕಾರಿ ವಕೀಲರ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಲಾ 298 ಎಲ್‌ಸಿಇ:95 ದಿನಾಂಕ: 07.04.2001.
2. ಸರ್ಕಾರದ ಆದೇಶ ಸಂಖ್ಯೆ: ಲಾ 159 ಎಲ್‌ಸಿಇ 2000 ದಿನಾಂಕ: 12.04.2001
3. ಸರ್ಕಾರದ ಆದೇಶ ಸಂಖ್ಯೆ: ಲಾ 51 ಎಲ್‌ಸಿಇ: 2002, ದಿನಾಂಕ: 25.06.2002.

**ಪ್ರಸ್ತಾವನೆ:**

ದೊಡ್ಡಬಳ್ಳಾಪುರ, ಚನ್ನರಾಯಪಟ್ಟಣ, ಚಳ್ಳಕೆರೆ, ಹೊಳಲ್ಕೆರೆ ಹಾಗೂ ಸೇಡಂ ಇಲ್ಲಿ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ನ್ಯಾಯಾಲಯಗಳನ್ನು ಸ್ಥಾಪಿಸಲು ಮೇಲೆ (1) (2) ಮತ್ತು (3)ರಲ್ಲಿ ಓದಲಾದ ಆದೇಶಗಳಲ್ಲಿ ಮಂಜೂರಾತಿ ನೀಡಲಾಗಿತ್ತು. ಈ ನ್ಯಾಯಾಲಯಗಳಿಗೆ ಅಪರ ಸರ್ಕಾರಿ ವಕೀಲರ ಹುದ್ದೆಗಳನ್ನು ಸೃಜಿಸುವುದರ ಅವಶ್ಯಕತೆ ಮನಗಂಡು ಸರ್ಕಾರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ: 32: ಎಲ್‌ಎಜಿ 2004, ಬೆಂಗಳೂರು, ದಿನಾಂಕ: 14ನೇ ನವೆಂಬರ್, 2005**

ಕೆಳಗಿನ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ನ್ಯಾಯಾಲಯಗಳಲ್ಲಿ ತಲಾ ಒಂದೊಂದು ಅಪರ ಸರ್ಕಾರಿ ವಕೀಲರ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ:

| ಕ್ರಮ ಸಂಖ್ಯೆ | ನ್ಯಾಯಾಲಯ ಇರುವ ಸ್ಥಳ | ಹುದ್ದೆ |
|---|---|---|
| 1. | ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ಅಪರ ಸರ್ಕಾರಿ ವಕೀಲರು. |
| 2. | ಚನ್ನರಾಯಪಟ್ಟಣ, ಹಾಸನ ಜಿಲ್ಲೆ. | ಅಪರ ಸರ್ಕಾರಿ ವಕೀಲರು. |
| 3. | ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ. | ಅಪರ ಸರ್ಕಾರಿ ವಕೀಲರು. |
| 4. | ಹೊಳಲ್ಕೆರೆ, ಚಿತ್ರದುರ್ಗ ಜಿಲ್ಲೆ. | ಅಪರ ಸರ್ಕಾರಿ ವಕೀಲರು. |
| 5. | ಸೇಡಂ, ಗುಲ್ಬರ್ಗಾ ಜಿಲ್ಲೆ | ಅಪರ ಸರ್ಕಾರಿ ವಕೀಲರು. |

ಕರ್ನಾಟಕ ಕಾನೂನು ಅಧಿಕಾರಿಗಳು (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳ (1977) ಷೆಡ್ಯೂಲ್ 6ರ ಪಟ್ಟಿಗೆ ಉಲ್ಲೇಖಿತ ಹುದ್ದೆಗಳನ್ನು ಅನುಕ್ರಮವಾಗಿ ಕ್ರಮ ಸಂಖ್ಯೆ: 43, 44, 45, 46 ಮತ್ತು 47 ಎಂಬುದಾಗಿ ಸೇರಿಸಿಕೊಳ್ಳತಕ್ಕದ್ದು.

ಇದಕ್ಕೆ ಆರ್ಥಿಕ ಇಲಾಖೆಯ ಸಹಮತಿಯನ್ನು ಅವರ ಟಿಪ್ಪಣಿ ಸಂಖ್ಯೆ: ಆಇ 944 ವೆಚ್ಚ-7: 2005 ದಿನಾಂಕ: 11.10.2005ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗಂಗನರಸಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ-1),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್.1680

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಜಿ.ವಿ. ನಾಯಕ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ನೋಟೀಸ್ ಸಂಖ್ಯೆ: ಸಿಆಸುಇ 34 ಎಸ್‌ಇಎನ್ 2004, ದಿನಾಂಕ: 05.03.2004 ಮತ್ತು
2. ಶ್ರೀ ಜಿ.ವಿ. ನಾಯಕ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಅವರ ದಿನಾಂಕ: 26.06.2004ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀ ಜಿ.ವಿ. ನಾಯಕ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ಇವರು ಈ ಹಿಂದೆ ಬೆಳಗಾಂ ವಿಭಾಗೀಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಸಹ ನಿರ್ದೇಶಕರಾಗಿದ್ದಾಗ 1998-99ನೇ ಸಾಲಿನ ವಿಶೇಷ ಶಿಕ್ಷಕರ ನೇಮಕಾತಿಗಳ ಪ್ರಕ್ರಿಯೆಯಲ್ಲಿ ತಾತ್ಕಾಲಿಕ ಆಯ್ಕೆ ಪಟ್ಟಿಯ ಪ್ರಕಟಣೆಯ ನಂತರ 5 ಮಂದಿ ಅಭ್ಯರ್ಥಿಗಳಿಂದ ಅರ್ಜಿಯೊಂದಿಗೆ ಸಲ್ಲಿಸದಿದ್ದ ಅಂಕಪಟ್ಟಿ/ ಮೀಸಲಾತಿ ಪ್ರಮಾಣ ಪತ್ರ ಇತ್ಯಾದಿಗಳನ್ನು ಪಡೆದು ಅಂತಿಮ ಆಯ್ಕೆ ಪಟ್ಟಿಯಲ್ಲಿ ನೇಮಕಾತಿಗೆ ಪರಿಗಣಿಸಿದ ಹಾಗೂ ಇಬ್ಬರು ಅಭ್ಯರ್ಥಿಗಳು ವಿಶ್ವವಿದ್ಯಾಲಯ ಪದವಿ ಹೊಂದದೆ ಇದ್ದರೂ ಸಹ ಅವರುಗಳನ್ನು ಮೀಸಲಾತಿ ಗುಂಪಿನಲ್ಲಿ ಸಂಗೀತ ಶಿಕ್ಷಕರನ್ನಾಗಿ ಆಯ್ಕೆ ಮಾಡಿ ನೇಮಕಾತಿ ಆದೇಶ ನೀಡಿದ ಆರೋಪಗಳಿಗಾಗಿ ಶ್ರೀ ಜಿ.ವಿ. ನಾಯಕ್ ಇವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 05.03.2004ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 26.06.2004ರ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿ ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರೆಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 34 ಎಸ್‌ಇಎನ್ 2004, ಬೆಂಗಳೂರು, ದಿನಾಂಕ: 25ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರನ್ನು ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ.ವಿ. ಶೀಲವಂತ, ನಿವೃತ್ತ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 05 ದಿನಾಂಕ: 23.08.2005 ರಂತೆ ರೂ.6000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001 ದಿನಾಂಕ: 04.03.2002 ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾಂ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಹುಬ್ಬಳ್ಳಿ-ಧಾರವಾಡದಲ್ಲಿ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಅವರು ಕ್ರಮಕೈಗೊಳ್ಳುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್.1681

**PERSONNEL ADMINISTRATIVE AND REFORMS SECRETARIAT**

**CORRIGENDUM**

**No. DPAR 17 SMR 2005, Bangalore, Dated: 26th November, 2005**

In notifications No. DPAR 1 SMR 2004 Dated: 27.11.2004 for the words "Malnad Hospital and Research Centre, Shimoga" appearing against Sl.No.57 under item I the words "Malnad Hospital and Institute of Oncology, Shimoga" shall be substituted.

By Order and in the Name of the Governor of Karnataka,

**K.V. RAMA**

PR-1682

Under Secretary to Government,

Department of Personnel and Administrative Reforms

(Service Rules-2).

**ಶಿಕ್ಷಣ ಸಚಿವಾಲಯ**

**ವಿಷಯ :** NCC ಇಲಾಖೆಗೆ 2005-06ನೇ ಸಾಲಿನಲ್ಲಿ ರೂ.20.00 ಲಕ್ಷಗಳನ್ನು ಪುನರ್ ವಿನಿಯೋಗ ಮಾಡಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, NCC ನಿರ್ದೇಶನಾಲಯದ ಉಪ ಮಹಾ ನಿರ್ದೇಶಕರ ಕಛೇರಿ, ಬೆಂಗಳೂರು ಇವರ ಪತ್ರ ಸಂಖ್ಯೆ: NCA-AC-II-088/- ಪುನರ್ ವಿನಿಯೋಗ/ 05-06 ದಿನಾಂಕ: 04.10.2005.

**ಪ್ರಸ್ತಾವನೆ:**

ನಿರ್ದೇಶಕರು, NCC ನಿರ್ದೇಶನಾಲಯದ ಉಪ ಮಹಾನಿರ್ದೇಶಕರ ಕಛೇರಿ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ: 04.10.2005ರ ಪ್ರಸ್ತಾವನೆಯಲ್ಲಿ NCC ಇಲಾಖೆಯ ಲೆಕ್ಕ ಶೀರ್ಷಿಕೆ 059-0E, Other expenditure (Camps) ರಲ್ಲಿ ರೂ. 275.00 ಲಕ್ಷ (ಇನ್ನೂರ ಎಪ್ಪತ್ತೈದು) ಆಯವ್ಯಯ ಒದಗಿಸಿದ್ದು, NCC ಕ್ಯಾಂಪ್‌ಗಳಿಗಾಗಿ ರೂ.230.00 (ಇನ್ನೂರ ಮೂವತ್ತು) ಲಕ್ಷಗಳನ್ನು ಈಗಾಗಲೇ ಬಿಡುಗಡೆ ಮಾಡಲಾಗಿದ್ದು ಉಳಿದ ರೂ.45.00 ಲಕ್ಷಗಳನ್ನು ನವದೆಹಲಿಯಲ್ಲಿ ನಡೆಯಲಿರುವ Republic Day ಕ್ಯಾಂಪ್‌ಗಾಗಿ ಕಾಯ್ದಿರಿಸಲಾಗಿರುವುದಾಗಿ ವರದಿ ಮಾಡಿರುವುದು. ಮುಂದುವರೆದು ಸದರಿ ಲೆಕ್ಕ ಶೀರ್ಷಿಕೆಯಲ್ಲಿ ಒದಗಿಸಲಾಗಿರುವ ಅನುದಾನವು ನೆಡೆಸಲು ಉದ್ದೇಶಿಸಲಾಗಿರುವ NCC ಶಿಬಿರ (Camps) ಗಳಿಗೆ ಕೊರತೆ ಬೀಳುವುದರಿಂದ, ಲೆಕ್ಕ ಶೀರ್ಷಿಕೆ 051-General Expenses IIರ ಅಡಿಯಲ್ಲಿ ಲಭ್ಯವಿರುವ ಅನುದಾನದಿಂದ ರೂ.20.00 (ಇಪ್ಪತ್ತು) ಲಕ್ಷಗಳನ್ನು ಪುನರ್ ವಿನಿಯೋಗಿಸಲು ಸರ್ಕಾರದ ಅನುಮತಿ ನೀಡುವಂತೆ ಕೋರಿರುವರು. ಈ ಮೊತ್ತದಲ್ಲಿ ರಾಷ್ಟ್ರೀಯ ಮಟ್ಟದ ನವದೆಹಲಿಯಲ್ಲಿ ನಡೆಯಲಿರುವ Republic Day ಶಿಬಿರ ಮತ್ತು ಇನ್ನಿತರೆ ಶಿಬಿರಗಳನ್ನು ನಿರ್ವಹಿಸಬಹುದು ಎಂಬುದಾಗಿ ತಿಳಿಸಿರುವರು.

ಮೇಲ್ಕಂಡ ಹಿನ್ನಲೆಯಲ್ಲಿ NCC ನಿರ್ದೇಶನಾಲಯದ ಪ್ರಸ್ತಾವನೆಯನ್ನು ಪರಿಶೀಲಿಸಿ ಲೆಕ್ಕ ಶೀರ್ಷಿಕೆ 051-General Expenses ರಿಂದ 059-other expenditure under Major Head 2204-00-102-1-01- ಶೀರ್ಷಿಕೆಗೆ ರೂ.20.00 (ಇಪ್ಪತ್ತು ಲಕ್ಷ ರೂಪಾಯಿಗಳು) ಲಕ್ಷಗಳನ್ನು ಪುನರ್ ವಿನಿಯೋಗ ಮಾಡಲು ಸರ್ಕಾರವು ತೀರ್ಮಾನಿಸಿದೆ ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 31 ರಾಯುಅ 05, ಬೆಂಗಳೂರು, ದಿನಾಂಕ: 30ನೇ ನವೆಂಬರ್, 2005**

NCC ಇಲಾಖೆಗೆ 2005-06ನೇ ಸಾಲಿನಲ್ಲಿ ರಾಷ್ಟ್ರೀಯ ಮಟ್ಟದ ನವದೆಹಲಿಯಲ್ಲಿ ನಡೆಯಲಿರುವ Republic Day ಶಿಬಿರ ಮತ್ತು ಇನ್ನಿತರೆ ಶಿಬಿರಗಳನ್ನು ನಡೆಸಲು ಕೊರತೆ ಬೀಳಬಹುದಾದ ವೆಚ್ಚವನ್ನು ಸರಿದೂಗಿಸಲು NCC ಇಲಾಖೆಯ ಆಯವ್ಯಯ ಅನುದಾನ ಲೆಕ್ಕ ಶೀರ್ಷಿಕೆ 051-General Expenses ರಿಂದ 059-Other Expenditure under Major Head 2204-00-102-1-01 ಶೀರ್ಷಿಕೆಗೆ ರೂ.20.00 (ಇಪ್ಪತ್ತು ಲಕ್ಷ ರೂಪಾಯಿಗಳು) ಲಕ್ಷಗಳನ್ನು ಪುನರ್ ವಿನಿಯೋಗ ಮಾಡಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: FD 09 TFP 2004 ದಿನಾಂಕ: 07.04.2005ರಲ್ಲಿ ಪ್ರದತ್ತವಾದ ಅಧಿಕಾರಗಳನ್ವಯ ಹಾಗೂ ಸದರಿ ಆದೇಶದಲ್ಲಿನ ನಿಬಂಧನೆ ಮತ್ತು ಷರತ್ತಿಗೊಳಪಟ್ಟು ಮತ್ತು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರು ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿಇ 929(A) ಐಎಫ್ (ಬಿ ಮತ್ತು ಎ) ದಿನಾಂಕ: 18.11.2005ರ ಟಿಪ್ಪಣಿಯಲ್ಲಿ ನೀಡಿರುವ ಸಹಮತಿಯಂತೆ ಈ ಅನುಮೋದನೆ ನೀಡಿ ಆದೇಶ ಹೊರಡಿಸಲಾಗಿದೆ.

ಈ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾದ ಮೊತ್ತವನ್ನು AC ಬಿಲ್ಲಿನಲ್ಲಿ ಡ್ರಾ ಮಾಡಿ ಸಾಧಿಲ್ವಾರು ವೆಚ್ಚದ ಕೈಪಿಡಿ ನಿಯಮ 36 (i-ರಿಂದ iv) ರಲ್ಲಿ ತಿಳಿಸಿರುವಂತೆ NDC ಬಿಲ್ಲುಗಳನ್ನು ಮಹಾಲೇಖಪಾಲಕರಿಗೆ ಸಲ್ಲಿಸಿ ಕ್ರಮಬದ್ಧಗೊಳಿಸಿ ತಪ್ಪದೇ ಸರ್ಕಾರಕ್ಕೆ ವರದಿ ಸಲ್ಲಿಸುವಂತೆಯೂ ಸಹ ಆದೇಶಿಸಲಾಗಿದೆ.

ಈ ಆದೇಶದೊಂದಿಗೆ NCC ನಿರ್ದೇಶನಾಲಯದ ಉಪ ಮಹಾ ನಿರ್ದೇಶಕರು ಕರ್ನಾಟಕ ಮತ್ತು ಗೋವಾ, ಬೆಂಗಳೂರು ಇವರು ಅನುಮೋದಿಸಿರುವ Form 22-A-AMFC (Art-108) of KFC ಇದರ ಮೂಲ ಪ್ರತಿಯನ್ನು ಲಗತ್ತಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸಾಮಾನ್ಯ).

**Form 22-A.M.F.C. [Art.108]**

**NCC Department**

**RE-APPROPRIATION STATEMENT TO ACCOMPANY ALL APPLICATIONS OR SANCTION TO EXPENDITURE NOT PROVIDED FOR IN THE BUDGET OR FOR ADDITIONAL ALLOTMENTS**

(Rs. in lakhs)

| Major, Minor, Sub & Detailed Heads of Budget (The same details must be given as in the printed Budget Estimate) | Head of estimate proposed to be increased | | | | | Heads of estimate proposed to be reduced | | | | Remarks (Here state fully the reasons for exceeding the allotment and anticipating savings) |
|---|---|---|---|---|---|---|---|---|---|---|
| | Amount as in the sanctioned budget estimate 2005-06 | Actual expenditure upto-date viz. | Probable expenditure during remainder of the year | Amount of addl allotment required | | Amount as in the sanctioned Estimate | Actual expenditure up-to- date | Probable expenditure during remainder of the year | Amount available for reappropriation | |
| 1 | 2 | 3 | 4 | 5 | | 6 | 7 | 8 | 9 | 10 |
| 2204-00-102-1-01-059- Other Expenditure | 275 | 235 | 60 | 20 | 051 G.E. | 313.87 | 95.90 | 197.97 | 20 | Due to insufficient allocation of funds under 059-O.E.'. the planned camps cannot to conducted. Hence by adopting economy measures in expenditure under '051-G.E.'., Rs.20.00 lakhs is to be reappropriated so that atleast the important camps can be conducted, which will serve for the purpose of earning R.D. Banner. |

Station: Bangalore
Date: 04.10.2005.

Note: Any further explanation should be given on the reverse.

**ಎಸ್.ಎಂ. ನಂದಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸಾಮಾನ್ಯ).

ಪಿ.ಆರ್.1694

**ಸುತ್ತೋಲೆ ಸಂಖ್ಯೆ: ಇಡಿ 35 ಅಅವಿ 2003, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್, 2005**

**ವಿಷಯ :** ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಯಾವುದೇ ಕರಡು ನಿಯಮಗಳನ್ನು ಪ್ರಕಟಿಸುವಾಗ ಕರಡು ನಿಯಮಗಳಿಗೆ ಪ್ರಚಾರವನ್ನು ವಿವಿಧ ಮಾಧ್ಯಮಗಳ ಮೂಲಕ ಮಾಡುವ ಬಗ್ಗೆ ಸೂಚನೆಗಳು.

ದಿನಾಂಕ: 08.12.2005ರಂದು ನಡೆದ ಕರ್ನಾಟಕ ವಿಧಾನ ಮಂಡಲದ ಅಧೀನ ಶಾಸನ ರಚನಾ ಸಮಿತಿಯ ಸಭೆಯಲ್ಲಿ, ಸರ್ಕಾರ ಕರಡು ನಿಯಮಗಳನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿ, ಅದರಿಂದ ಬಾಧಿತರಾಗಬಹುದಾದವರಿಂದ ಆಕ್ಷೇಪಣೆ/ ಸಲಹೆಗಳನ್ನು ಕರೆಯುವ ವಿಷಯಕ್ಕೆ ಸಾಕಷ್ಟು ಪ್ರಚಾರ ಕೊಡಬೇಕೆಂಬ ಅಂಶ, ಚರ್ಚೆಗೆ ಬಂತು. ಆ ಚರ್ಚೆಯ ಹಿನ್ನೆಲೆಯಲ್ಲಿ ಈ ಕೆಳಕಂಡ ಸೂಚನೆಗಳನ್ನು ಈ ಮೂಲಕ ನೀಡಿದೆ.

2. ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಯಾವುದೇ ನಿಯಮಗಳನ್ನು ರಚಿಸುವಾಗ ಭಾದಿತರಿಂದ ಆಕ್ಷೇಪನೆ/ ಸಲಹೆಗಳನ್ನು ಪಡೆಯಲು 30 ದಿನಗಳ ಕಾಲಾವಕಾಶ ನೀಡಿ, ಕರಡು ನಿಯಮಗಳನ್ನು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗುತ್ತಿದೆ. ಅದರಿಂದ ಭಾದಿತರಾಗಬಹುದಾದವರು ಆಕ್ಷೇಪಣೆ/ ಸಲಹೆಗಳನ್ನು ಒಂದು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸಲು ಆಸ್ಪದ ಇದೆಯೆಂಬ ಅಂಶವನ್ನು ಸಂಬಂಧಿಸಿದವರ ಗಮನಕ್ಕೆ ತರಲು.

ಅ) ಈ ಸುತ್ತೋಲೆಗೆ ಲಗತ್ತಿಸಲಾದ ನಮೂನೆಯಲ್ಲಿ ಒಂದು ಪತ್ರಿಕಾ ಟಿಪ್ಪಣಿ (Press Note) ತಯಾರಿಸಿ, ಅದನ್ನು ವಾರ್ತಾ ಇಲಾಖೆಗೆ ಕಳುಹಿಸತಕ್ಕದ್ದು.

ಆ) ಅದಕ್ಕೆ ರಾಜ್ಯದಲ್ಲಿ ಪ್ರಕಟವಾಗುವ ಪ್ರಮುಖ ದಿನ ಪತ್ರಿಕೆಗಳ ಹಾಗೂ ದೂರದರ್ಶನ ಮತ್ತು ರೇಡಿಯೋ ಇತ್ಯಾದಿ ಮಾಧ್ಯಮಗಳ ಮೂಲಕ ಸರ್ಕಾರಕ್ಕೆ ವೆಚ್ಚವಿಲ್ಲದೆ ಪ್ರಚಾರ ನೀಡಲು ವಾರ್ತಾ ಇಲಾಖೆಯನ್ನು ಕೋರತಕ್ಕದ್ದು.

ಇ) ಇದಲ್ಲದೇ ಶಿಕ್ಷಣ ಇಲಾಖೆಯ ವೆಬ್‌ಸೈಟ್ **WWW.schooleducation.kar.nic.in** ಹಾಗೂ **WWW.karnatakaeducation.org.in** ನಲ್ಲಿಯೂ ಅದನ್ನು ಪ್ರಕಟಿಸಬೇಕು.

3. ಈ ಕ್ರಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ತ.ಮ. ವಿಜಯ ಭಾಸ್ಕರ್**
ಸರ್ಕಾರದ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ).

## ನಮೂನೆ

ಸಂಖ್ಯೆ:

### ಪತ್ರಿಕಾ ಟಿಪ್ಪಣಿ

ಶಿಕ್ಷಣ ಇಲಾಖೆ, (ಸಚಿವಾಲಯ) ದಿನಾಂಕ:......................ರ *ರಾಜ್ಯ ಪತ್ರದಲ್ಲಿ/ *ವಿಶೇಷ ರಾಜ್ಯ ಪತ್ರದಲ್ಲಿ......................ವಿಷಯಕ್ಕೆ ಸಂಬಂಧಿಸಿದ...............................ಎಂಬ *ನಿಯಮಗಳ/ *ತಿದ್ದುಪಡಿ ನಿಯಮಗಳ ಕರಡನ್ನು ಪ್ರಕಟಿಸಿದೆ. ಅದರಿಂದ ಬಾಧಿತರಾಗಬಹುದಾದವರು ದಿನಾಂಕ:.................ರ ಒಳಗೆ ಸರ್ಕಾರಕ್ಕೆ ಅಂದರೆ, *ಸರ್ಕಾರದ ಪ್ರಧಾನ ಕಾರ್ಯದರ್ಶಿ ಶಿಕ್ಷಣ ಇಲಾಖೆ/ *ಸರ್ಕಾರದ ಕಾರ್ಯದರ್ಶಿ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ), ಶಿಕ್ಷಣ ಇಲಾಖೆ, ಕೊಠಡಿ ಸಂಖ್ಯೆ: 541, 5ನೇ ಮಹಡಿ, ಬಹುಮಹಡಿ ಕಟ್ಟಡ, ಡಾ: ಬಿ.ಆರ್.ಅಂಬೇಡ್ಕರ್ ವೀಧಿ, ಬೆಂಗಳೂರು-560 001, ಫ್ಯಾಕ್ಸ್ ಸಂಖ್ಯೆ: 22385545 ಇ-ಮೇಲ್ ವಿಳಾಸ:**secyprim-edu@karnataka.gov.in** ಇವರಿಗೆ ಆಕ್ಷೇಪಣೆ/ ಸಲಹೆಗಳನ್ನು ಸಲ್ಲಿಸಲು ಅಸ್ಪದ ಇರುತ್ತದೆ.

***ಅನ್ವಯವಾಗದೇ ಇರುವ ಅಂಶವನ್ನು ಹೊಡೆದು ಹಾಕುವುದು.**

**ಎಸ್.ಎಂ. ನಂದಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸಾಮಾನ್ಯ).

ಪಿ.ಆರ್.1757

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** 2005-06ನೇ ಸಾಲಿಗೆ ಹೊಸದಾಗಿ ನಾಲ್ಕು ವೃತ್ತಿಪರ ಮೆಟ್ರಿಕ್-ನಂತರದ ಬಾಲಕರು/ ಬಾಲಕಿಯರ ವಿದ್ಯಾರ್ಥಿನಿಲಯಗಳನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ :**
1. ಆಯುಕ್ತರು ಹಿಂದುಳಿದ ವರ್ಗಗಳ ಇಲಾಖೆ ಇವರ ಪತ್ರ ಸಂಖ್ಯೆ: ಹಿಂವನಿ/ ವನಿಶಾ.2/ ಸಿ.ಆರ್.2/ 2005-06 ದಿನಾಂಕ: 15.04.2005.
2. ದಿನಾಂಕ: 07.10.2005 ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

2005-06ನೇ ಸಾಲಿನ ಆಯವ್ಯಯ ಭಾಷಣದಲ್ಲಿ ವೃತ್ತಿ ಶಿಕ್ಷಣ ಕಾಲೇಜುಗಳಿಗೆ ಸೇರಿಕೊಳ್ಳುವ ದುರ್ಬಲ ವರ್ಗದ ವಿದ್ಯಾರ್ಥಿಗಳಿಗೆ ಸೂಕ್ತ ಹಾಸ್ಟೆಲ್ ಸೌಲಭ್ಯ ಒದಗಿಸಲು ಬೆಂಗಳೂರು, ಮೈಸೂರು, ಬಳ್ಳಾರಿ ಮತ್ತು ಹುಬ್ಬಳ್ಳಿಗಳಲ್ಲಿ ನಾಲ್ಕು ಹಾಸ್ಟೆಲ್‌ಗಳನ್ನು ತೆರೆಯುವುದಾಗಿ ಘೋಷಿಸಲಾಗಿದೆ. ಆಯುಕ್ತರು ಹಿಂದುಳಿದ ವರ್ಗಗಳ ಇಲಾಖೆ ಇವರು ಆಯವ್ಯಯ ಭಾಷಣದನ್ವಯ ರಾಜ್ಯದಲ್ಲಿ 50 ಸಂಖ್ಯಾಬಲದ ಹಿಂದುಳಿದ ವರ್ಗಗಳ ನಾಲ್ಕು ವೃತ್ತಿಪರ ಬಾಲಕರ/ ಬಾಲಕಿಯರ ಮೆಟ್ರಿಕ್- ನಂತರದ ವಿದ್ಯಾರ್ಥಿನಿಲಯಗಳನ್ನು ಈ ಕೆಳಕಂಡ ಸ್ಥಳಗಳಲ್ಲಿ ಪ್ರಾರಂಭಿಸಲು ಮಂಜೂರು ಮಾಡುವ ಅಗತ್ಯತೆ ಇರುವುದಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| | | | |
|---|---|---|---|
| 1. | ವೃತ್ತಿಪರ ಮೆಟ್ರಿಕ್-ನಂತರದ ನಿಲಯ, ಬೆಂಗಳೂರು ನಗರ | ಬಾಲಕ/ ಬಾಲಕಿ | 50 |
| 2. | ವೃತ್ತಿಪರ ಮೆಟ್ರಿಕ್-ನಂತರದ ನಿಲಯ, ಮೈಸೂರು ನಗರ | ಬಾಲಕ/ ಬಾಲಕಿ | 50 |
| 3. | ವೃತ್ತಿಪರ ಮೆಟ್ರಿಕ್-ನಂತರದ ನಿಲಯ, ಬಳ್ಳಾರಿ ನಗರ | ಬಾಲಕ/ ಬಾಲಕಿ | 50 |
| 4. | ವೃತ್ತಿಪರ ಮೆಟ್ರಿಕ್-ನಂತರದ ನಿಲಯ, ಹುಬ್ಬಳ್ಳಿ | ಬಾಲಕ/ ಬಾಲಕಿ | 50 |

50 ಸಂಖ್ಯಾಬಲದ ಒಂದು ವೃತ್ತಿಪರ ಮೆಟ್ರಿಕ್-ನಂತರದ ಬಾಲಕರ ಹಾಗೂ ಬಾಲಕಿಯರ ವಿದ್ಯಾರ್ಥಿ ನಿಲಯ ಮಂಜೂರು ಮಾಡಲು ವಾರ್ಷಿಕವಾಗಿ ಬೇಕಾಗುವ ಸಿಬ್ಬಂದಿ ವೆಚ್ಚ ಆವರ್ತಕ ವೆಚ್ಚ ಹಾಗೂ ಅನಾವರ್ತಕ ವೆಚ್ಚ ರೂ.7.02 ಲಕ್ಷಗಳು ವೆಚ್ಚವಾಗುತ್ತದೆಯೆಂದು ಹಾಗೂ ಈ ಕೆಳಕಂಡ ಹುದ್ದೆಗಳನ್ನು ಮಂಜೂರು ಮಾಡಲು ಕೋರಿರುತ್ತಾರೆ.

| ಕ್ರ.ಸಂ. | ಹುದ್ದೆಯ ವಿವರ | ವೇತನ ಶ್ರೇಣಿ | ಒಂದು ವಿದ್ಯಾರ್ಥಿನಿಲಯಕ್ಕೆ ಬೇಕಾಗುವ ಹುದ್ದೆಗಳ ಸಂಖ್ಯೆ | ನಾಲ್ಕು ವಿದ್ಯಾರ್ಥಿನಿಲಯಗಳಿಗೆ ಬೇಕಾಗುವ ಸಿಬ್ಬಂದಿ ಸಂಖ್ಯೆ |
|---|---|---|---|---|
| 1. | ವಾರ್ಡನ್ | 5200-9580 | 1 | 4 |
| 2. | ಅಡುಗೆಯವರು | 2600-4350 | 2 | 8 |
| 3. | ಅಡುಗೆ ಸಹಾಯಕರು | 2500-3850 | 1 | 4 |
| 4. | ಕಾವಲುಗಾರರು (ಬಾಲಕಿಯರ ನಿಲಯಕ್ಕೆ) | 2500-3850 | 1 | 2 (ಬಾಲಕಿಯರ ವಿದ್ಯಾರ್ಥಿನಿಲಯಗಳಿಗೆ ಮಾತ್ರ) |
| | **ಒಟ್ಟು** | | **5** | **18** |

ಈ ಪ್ರಸ್ತಾವನೆಗೆ ತಗಲುವ ಒಟ್ಟು ವೆಚ್ಚ ರೂ.28.00 ಲಕ್ಷಗಳನ್ನು ರಾಜ್ಯವಲಯ ಯೋಜನೆಯ ಲೆಕ್ಕಶೀರ್ಷಿಕೆ 2225-03-277-2-53 ರಡಿಯಲ್ಲಿ 2005-06ನೇ ಸಾಲಿನಲ್ಲಿ ಒದಗಿಸಿರುವ ಪೂರಕ ಅನುದಾನದಿಂದ ಭರಿಸುವುದಾಗಿ ಆಯುಕ್ತರು ತಿಳಿಸಿರುತ್ತಾರೆ.

ದಿನಾಂಕ: 07.10.2005ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆಯಲ್ಲಿ ಈ ಪ್ರಸ್ತಾವನೆಯನ್ನು ಕುಲಂಕುಷವಾಗಿ ಪರಿಶೀಲಿಸಿ ಈ ಪ್ರಸ್ತಾವನೆಗೆ ಅನುಮೋದನೆ ನೀಡಿದ್ದು ಅದರಂತೆ ಈ ಆದೇಶ.

### ಸರ್ಕಾರದ ಆದೇಶ ಸಂಖ್ಯೆ: ಸಕಇ 180 ಬಿಎಂಎಸ್ 2005, ಬೆಂಗಳೂರು, ದಿನಾಂಕ: 8ನೇ ನವೆಂಬರ್, 2005

2005-06ನೇ ಸಾಲಿಗೆ ರಾಜ್ಯದ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳ ಶೈಕ್ಷಣಿಕ ಅಭಿವೃದ್ಧಿಗಾಗಿ 50 ಸಂಖ್ಯಾಬಲದ 4 ಮೆಟ್ರಿಕ್ ನಂತರದ (ವೃತ್ತಿಪರ) ಬಾಲಕ/ ಬಾಲಕಿಯರ ವಿದ್ಯಾರ್ಥಿ ನಿಲಯಗಳನ್ನು ಈ ಕೆಳಕಂಡ ಸ್ಥಳಗಳಲ್ಲಿ ಪ್ರಾರಂಭಿಸಲು ಸರ್ಕಾರವು ಮಂಜೂರಾತಿ ನೀಡಿದೆ.

| ಕ್ರ.ಸಂ. | ಜಿಲ್ಲೆಯ ಹೆಸರು | ವಿದ್ಯಾರ್ಥಿ ನಿಲಯದ ಸ್ಥಳ | ಬಾಲಕ/ ಬಾಲಕಿ | ಮಂಜೂರಾತಿ ಸಂಖ್ಯೆ |
|---|---|---|---|---|
| 1. | ಬೆಂಗಳೂರು ಜಿಲ್ಲೆ | ವೃತ್ತಿಪರ ಮೆಟ್ರಿಕ್-ನಂತರದ ನಿಲಯ, ಬೆಂಗಳೂರು. | ಬಾಲಕಿ | 50 |
| 2. | ಮೈಸೂರು ಜಿಲ್ಲೆ | ವೃತ್ತಿಪರ ಮೆಟ್ರಿಕ್-ನಂತರದ ನಿಲಯ, ಮೈಸೂರು. | ಬಾಲಕ | 50 |
| 3. | ಬಳ್ಳಾರಿ ಜಿಲ್ಲೆ | ವೃತ್ತಿಪರ ಮೆಟ್ರಿಕ್-ನಂತರದ ನಿಲಯ, ಬಳ್ಳಾರಿ. | ಬಾಲಕ | 50 |
| 4. | ಧಾರವಾಡ ಜಿಲ್ಲೆ | ವೃತ್ತಿಪರ ಮೆಟ್ರಿಕ್-ನಂತರದ ನಿಲಯ, ಹುಬ್ಬಳ್ಳಿ. | ಬಾಲಕಿ | 50 |

ಈ ವಿದ್ಯಾರ್ಥಿನಿಲಯಗಳಿಗೆ ಈ ಕೆಳಕಂಡ ಹುದ್ದೆಗಳನ್ನು ಮಂಜೂರು ಮಾಡಲಾಗಿದೆ.

| ಕ್ರ.ಸಂ. | ಹುದ್ದೆಯ ವಿವರ | ವೇತನ ಶ್ರೇಣಿ | ಒಂದು ವಿದ್ಯಾರ್ಥಿನಿಲಯಕ್ಕೆ ಬೇಕಾಗುವ ಹುದ್ದೆಗಳ ಸಂಖ್ಯೆ | ನಾಲ್ಕು ವಿದ್ಯಾರ್ಥಿನಿಲಯಗಳಿಗೆ ಬೇಕಾಗುವ ಸಿಬ್ಬಂದಿ ಸಂಖ್ಯೆ |
|---|---|---|---|---|
| 1. | ವಾರ್ಡನ್ | 5200-9580 | 1 | 4 |
| 2. | ಅಡುಗೆಯವರು | 2600-4350 | 2 | 8 |
| 3. | ಅಡುಗೆ ಸಹಾಯಕರು | 2500-3850 | 1 | 4 |
| 4. | ಕಾವಲುಗಾರರು (ಬಾಲಕಿಯರ ನಿಲಯಕ್ಕೆ) | 2500-3850 | 1 | 2 (ಬಾಲಕಿಯರ ವಿದ್ಯಾರ್ಥಿನಿಲಯಗಳಿಗೆ ಮಾತ್ರ) |
| | ಒಟ್ಟು | | 5 | 18 |

ಇದಕ್ಕೆ ತಗಲುವ ವೆಚ್ಚವನ್ನು ರಾಜ್ಯವಲಯ ಯೋಜನೆ ಲೆಕ್ಕಶೀರ್ಷಿಕೆ 2225-03-277-2-53ರಡಿ ಭರಿಸತಕ್ಕದ್ದು.

ಈ ಆದೇಶವನ್ನು ಅಧಿಕಾರಿಯುಕ್ತ ಸಮಿತಿಯು ತನ್ನ ನಡವಳಿ ದಿನಾಂ: 07.10.2005ರಂದು ನೀಡಿದ ಅನುಮೋದನೆ ಪ್ರಕಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಪ್ರಾಣದೇವ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್.1696

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ :** ರಾಜಭಾಷಾ (ವಿಧಾಯೀ) ಆಯೋಗವನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಲಾ 4 ಎಲ್‌ಎಂಪಿ 97, ದಿನಾಂಕ: 04.07.1997.
2. ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 01 ಎಲ್‌ಎಂಪಿ 99, ದಿನಾಂಕ: 05.06.1999.
3. ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 1 ಎಲ್‌ಎಂಪಿ 2000, ದಿನಾಂಕ: 12.04.2001.
4. ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 10 ಭಾನಿವಿ 2002, ದಿನಾಂಕ:22.04.2002.
5. ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 18 ಭಾನಿವಿ 2003, ದಿನಾಂಕ: 04.09.2003.
6. ಇದೇ ಕ್ರಮಾಂಕದ ಆದೇಶ ದಿನಾಂಕ: 14.10.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಕಾಲಾವಧಿಯನ್ನು 31ನೇ ಜನವರಿ 1999ರ ತನಕ ವಿಸ್ತರಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕಾಲಾವಧಿಯನ್ನು 1ನೇ ಫೆಬ್ರವರಿ 1999ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆಯೋಗದ ಕಾಲಾವಧಿಯನ್ನು ದಿನಾಂಕ: 30.05.2001ರವರೆಗೆ ಮುಂದುವರಿಸಲಾಗಿದೆ.

ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆಯೋಗದ ಕಾಲಾವಧಿಯನ್ನು ದಿನಾಂಕ: 30.05.2003ರವರೆಗೆ ಮುಂದುವರಿಸಲಾಗಿದೆ.

ಮೇಲೆ (5)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆಯೋಗವನ್ನು ಪುನರ್ ರಚಿಸಿ ಆಯೋಗದ ಅವಧಿಯನ್ನು ದಿನಾಂಕ: 30.05.2006ರವರೆಗೆ ವಿಸ್ತರಿಸಲಾಗಿದೆ.

ಮೇಲೆ (6)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆಯೋಗವನ್ನು ಪುನರ್ ರಚಿಸಿ ಆಯೋಗದ ಅವಧಿಯನ್ನು ದಿನಾಂಕ: 30.05.2006ರವರೆಗೆ ನಿಗದಿಪಡಿಸಲಾಗಿದೆ. ಹಾಗೂ ಈ ಅವಧಿಯಲ್ಲಿ ಆಯೋಗದ ಅಧ್ಯಕ್ಷರು, ಉಪಾಧ್ಯಕ್ಷರು ಮತ್ತು ಸರ್ಕಾರೇತರ ಸದಸ್ಯರುಗಳ ಸೇವಾ ಷರತ್ತುಗಳು ಪ್ರಸ್ತುತ ಜಾರಿಯಲ್ಲಿರುವ ಆದೇಶಗಳಿಗೆ ಒಳಪಟ್ಟಿರುತ್ತದೆ ಎಂದು ಆದೇಶಿಸಿದೆ. ಉಲ್ಲೇಖಿತ (4)ರ ಆದೇಶದಲ್ಲಿ ಆಯೋಗದ ಅಧ್ಯಕ್ಷರಿಗೆ ಪ್ರತಿದಿನ ರೂ.250-00ರಂತೆ ಗರಿಷ್ಠ ತಿಂಗಳಿಗೆ ರೂ.5000-00 (ಐದು ಸಾವಿರ ರೂಪಾಯಿಗಳು ಮಾತ್ರ) ಹಾಗೂ ಸದಸ್ಯರಿಗೆ ಪ್ರತಿದಿನ ರೂ.200-00ರಂತೆ ಗರಿಷ್ಠ ತಿಂಗಳಿಗೆ ರೂ.4000-00 (ನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಸಂಭಾವನೆಯನ್ನು ನಿಗದಿಪಡಿಸಿದೆ. ಮೇಲೆ (6)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಉಪಾಧ್ಯಕ್ಷರ ಹುದ್ದೆಗಳಿದ್ದು, ಅವರಿಗೆ ಸಂಭಾವನೆಯನ್ನು ನಿಗದಿಪಡಿಸುವ ಬಗ್ಗೆ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 44 ಭಾನಿವಿ 2005, ಬೆಂಗಳೂರು, ದಿನಾಂಕ: 3ನೇ ಡಿಸೆಂಬರ್, 2005**

ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 44 ಭಾನಿವಿ 2005, ದಿನಾಂಕ: 14.10.2005ನ್ನು ಭಾಗಶಃ ಮಾರ್ಪಡಿಸಿ ರಾಜ ಭಾಷಾ (ವಿಧಾಯೀ) ಆಯೋಗದ ಉಪಾಧ್ಯಕ್ಷರಿಗೆ ಪ್ರತಿ ದಿನ ರೂ.250-00 ರಂತೆ ಗರಿಷ್ಠ ತಿಂಗಳಿಗೆ ರೂ.4500-00 (ನಾಲ್ಕು ಸಾವಿರದ ಐದು ನೂರು ರೂಪಾಯಿಗಳು ಮಾತ್ರ) ಸಂಭಾವನೆಯನ್ನು ನಿಗದಿಪಡಿಸಿದೆ.

ಈ ಆಯೋಗಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2052- ಸಚಿವಾಲಯ-ಸಾಮಾನ್ಯ ಸೇವೆ-092-08- ಭಾಷಾಂತರ ನಿರ್ದೇಶಕರು-ರಾಜಭಾಷಾ (ವಿಧಾಯೀ) ಆಯೋಗ- (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1035 ವೆಚ್ಚ-7:2005, ದಿನಾಂಕ: 11.11.2005ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಕೆ. ಬೋರೆಗೌಡ**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

ಪಿ.ಆರ್.1697

**LAW JUSTICE AND HUMAN RIGHTS SECRETARIAT**
**CORRIGENDUM**
**No. LAW 282 LAC 2005, Bangalore, Dated:30th November, 2005**

**Sub :** Implementation of recommendations of the First National Judicial Pay Commission in the State of Karnataka reg.

**Ref :** G.O. No. LAW 124 LAC 1997 Dated: 04.02.2004.

The word **'Pension'** appearing in (c) under heading **"Pension structure for the past pensioners"** of G.O. No. LAW 124 LAC 1997 Dated: 04.02.2004 shall be read as **'pension/ family pension'.**

By Order and in the Name of the Governor of Karnataka,
**GANGANARASAIAH**
Under Secretary to Government,
Law Justice and Human Rights Department.

PR-1700

**ಒಳಾಡಳಿತ ಸಚಿವಾಲಯ**
**ತಿದ್ದುಪಡಿ**
**ಸಂಖ್ಯೆ: ಒಇ 676 ಪಿಪಿಇ 2005, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್, 2005**

ಸಮ ಸಂಖ್ಯೆಯ ಅಧಿಸೂಚನೆ ದಿನಾಂಕ: 24.08.2005ರ ಕ್ರಮ ಸಂಖ್ಯೆ: (8)ರ ಅಂಕಣ (5) ರಲ್ಲಿರುವ '2ನೇ ಅಧಿಕ ಸರ್ಕಾರಿ ಅಭಿಯೋಜಕರು, 2ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಧಾರವಾಡ' ಎಂಬುದರ ಬದಲಾಗಿ '1ನೇ ಅಧಿಕ ಸರ್ಕಾರಿ ಅಭಿಯೋಜಕರು, 1ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಧಾರವಾಡ' ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು. ಇದರ ಹೊರತಾಗಿ ಸದರಿ ಆದೇಶದಲ್ಲಿ ಬೇರೆ ಯಾವ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾ. ಮತ್ತು ಸು. ಕಾಫಿಪೋಸ ಮತ್ತು ಅಭಿಯೋಗ).

ಪಿ.ಆರ್.1701

**ತಿದ್ದುಪಡಿ**
**ಸಂಖ್ಯೆ: ಒಇ 497 ಪಿಪಿಇ 2005, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್, 2005**

ಸಮ ಸಂಖ್ಯೆಯ **ಅಧಿಸೂಚನೆ ದಿನಾಂಕ:08.07.2005ರಲ್ಲಿ 'ರಾಯಚೂರಿನ 2ನೇ ತ್ವರಿತ ವಿಲೇವಾರಿ ನ್ಯಾಯಾಲಯ' ಎಂಬುದರ ಬದಲಾಗಿ' ರಾಯಚೂರಿನ 1ನೇ ತ್ವರಿತ ವಿಲೇವಾರಿ ನ್ಯಾಯಾಲಯ'** ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು. ಇದರ ಹೊರತಾಗಿ ಸದರಿ ಅಧಿಸೂಚನೆಯಲ್ಲಿ ಬೇರೆ ಯಾವ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾ. ಮತ್ತು ಸು. ಕಾಫಿಪೋಸ ಮತ್ತು ಅಭಿಯೋಗ).

ಪಿ.ಆರ್.1702

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಕರ್ನಾಟಕ ಸರ್ಕಾರ ಸಚಿಚಾಲಯದ, ಅರಣ್ಯ, ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿರುವ ರೂ.6000-11200ರ ವೇತನ ಶ್ರೇಣಿಯ ಒಂದು ವೈಜ್ಞಾನಾಧಿಕಾರಿ, ಗ್ರೇಡ್-2 ಹುದ್ದೆಯನ್ನು 'ವೇತನ ಶ್ರೇಣಿ ರಹಿತ' ಹುದ್ದೆ ಎಂದು ಪರಿವರ್ತಿಸಿ ಮುಂದುವರಿಸಿರುವ ಅವಧಿಯನ್ನು ಪುನಃ ಮುಂದುವರೆಸುವ ಬಗ್ಗೆ.

**ಓದಲಾಗಿದೆ :** ಅನಧಿಕೃತ ಟಿಪ್ಪಣಿ ಸಂಖ್ಯೆ: ಡಿಪಿಎಆರ್ 68 ಎಸ್‌ಎಫ್‌ಪಿ 2005, ದಿನಾಂಕ: 06.10.2005.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಅನಧಿಕೃತ ಟಿಪ್ಪಣಿಯಲ್ಲಿ ದಿನಾಂಕ: 16.02.2004ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 8 ಸಸಿವಿ 2004ರಲ್ಲಿ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿನ ವೈಜ್ಞಾನಾಧಿಕಾರಿ ಹುದ್ದೆಯೊಂದನ್ನು ವೇತನ ಶ್ರೇಣಿ ರಹಿತ ಎಂದು ಪರಿವರ್ತಿಸಿ ಮುಂದುವರಿಸಿದ ಹುದ್ದೆಯ ಅವಧಿಯು ದಿನಾಂಕ:23.04.2005ರಂದು ಕೊನೆಗೊಂಡಿರುವುದರಿಂದ, ಆ ಹುದ್ದೆಯ ಅವಧಿಯನ್ನು ದಿನಾಂಕ: 24.04.2005ರಿಂದ ಜಾರಿಗೆ ಬರುವಂತೆ ಪುನಃ ಒಂದು ವರ್ಷದ ಅವಧಿಗೆ ಅಥವಾ ಸದರಿ ಹುದ್ದೆಯ ಅವಶ್ಯಕತೆ ಇರುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸಿವಿ 73 ಸಸಿವಿ 2005, ಬೆಂಗಳೂರು, ದಿನಾಂಕ: 29ನೇ ನವೆಂಬರ್, 2005**

ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿರುವ ವೈಜ್ಞಾನಾಧಿಕಾರಿ ಗ್ರೇಡ್-2 ಹುದ್ದೆಯೊಂದನ್ನು ವೇತನ ಶ್ರೇಣಿ ರಹಿತ ಹುದ್ದೆ ಎಂದು ಪರಿವರ್ತಿಸಿ ಮುಂದುವರಿಸಿರುವ ಅವಧಿಯನ್ನು ದಿನಾಂಕ: 24.04.2005ರಿಂದ ಜಾರಿಗೆ ಬರುವಂತೆ ಪುನಃ ಒಂದು ವರ್ಷದ ಅವಧಿಗೆ ಅಥವಾ ಸದರಿ ಹುದ್ದೆಯ ಅವಶ್ಯಕತೆ ಇರುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ಅನುಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

ಪಿ.ಆರ್.1711

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 32 ಹೆಚ್‌ಹೆಚ್‌ಎಲ್ 2005, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2005**

ಮಾನ್ಯ ಕೇಂದ್ರ ಇಂಧನ ಸಚಿವರಾದ ಶ್ರೀ ಪಿ.ಎಂ. ಸಯೀದ್ ರವರು ದಿನಾಂಕ: 18.12.2005 ರಂದು ಸಿಯೋಲ್, ಸೌತ್ ಕೋರಿಯಾದಲ್ಲಿ ನಿಧನರಾದ ವಿಷಯವನ್ನು ರಾಜ್ಯಸರ್ಕಾರವು ತೀವ್ರ ಸಂತಾಪದಿಂದ ಈ ಮೂಲಕ ಪ್ರಕಟಿಸಿದೆ. ದಿವಂಗತರ ಗೌರವಾರ್ಥವಾಗಿ ದಿನಾಂಕ: 19.12.2005 ರಂದು ಒಂದು ದಿವಸ ರಾಜ್ಯದ ರಾಜಧಾನಿ ಬೆಂಗಳೂರಿನಲ್ಲಿ ನಿಯತವಾಗಿ ಹಾರಿಸಲಾಗುವ ಸರ್ಕಾರದ ಎಲ್ಲಾ ಕಟ್ಟಡಗಳ ಮೇಲೆ ರಾಷ್ಟ್ರಧ್ವಜವನ್ನು ಅರ್ಧಮಟ್ಟದಲ್ಲಿ ಹಾರಿಸಲಾಗುವುದು.

ಪಿ.ಆರ್. 1746

**ಹೆಚ್.ಎನ್. ಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ).

## ಕಂದಾಯ ಸಚಿವಾಲಯ

**ವಿಷಯ:** ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ತಾಲ್ಲೂಕು, ಕುಕ್ಕಿಪಾಡಿ, ಕೋರ್ಯಾರು ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಕಂಇ 77 ಮುಸೇವಿ 2003, ದಿನಾಂಕ: 30.04.2003.

2) ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಏಕರೂಪಶಾಸನ/ಸಿಆರ್/6/2003-04, ದಿನಾಂಕ: 27.10.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 34245 ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳನ್ನಾಗಿ ಪ್ರಕಟಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಪತ್ರದಲ್ಲಿ ಧಾರ್ಮಿಕ ದತ್ತಿ ಆಯುಕ್ತರು, ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ತಾಲ್ಲೂಕು, ಕುಕ್ಕಿಪಾಡಿ, ಕೋರ್ಯಾರು ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನವು ಕುಡುಂಬಿ ಜನಾಂಗದ ಗೌಡ ಸಮುದಾಯಕ್ಕೆ ಸೇರಿರುವುದೆಂದು ಜಿಲ್ಲಾಧಿಕಾರಿಗಳು / ಧಾರ್ಮಿಕ ದತ್ತಿ ಆಯುಕ್ತರು ಸದರಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಕೈ ಹೊರತುಪಡಿಸಲು ಶಿಫಾರಸ್ಸು ಮಾಡಿದ್ದಾರೆ. ಸದರಿ ಶಿಫಾರಸ್ಸನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 151 ಮುಆಬಿ 2004, ಬೆಂಗಳೂರು, ದಿನಾಂಕ: 13ನೇ ಡಿಸೆಂಬರ್ 2005**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಅಧಿನಿಯಮ 1 ಉಪ ನಿಯಮ 4(ii)ರ ಪ್ರಕಾರ ಒಂದು ಹಿಂದೂ ಧಾರ್ಮಿಕ ಪಂಗಡವು ಸ್ಥಾಪಿಸಿರುವ ವ್ಯವಸ್ಥೆಗೊಳಿಸಿರುವ, ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆಗೆ ಅಥವಾ ಧರ್ಮಾದಾಯ ದತ್ತಿಗೆ ಅನ್ವಯಿಸತಕ್ಕದ್ದಲ್ಲ ಎಂದಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 77 ಮುಸೇವಿ 2003, ದಿನಾಂಕ: 30.04.2003 ರಲ್ಲಿ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ತಾಲ್ಲೂಕು, ಕುಕ್ಕಿಪಾಡಿ ಗ್ರಾಮದ ಶ್ರೀ ದುರ್ಗಾಪರಮೇಶ್ವರಿ ದೇವಿ ಕ್ರಮ ಸಂಖ್ಯೆ 83, ಪುಟ ಸಂಖ್ಯೆ: 285ನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಿವಲಿಂಗ**

ಪಿ.ಆರ್. 1747

ಪೀಠಾಧಿಕಾರಿ, ಕಂದಾಯ ಇಲಾಖೆ (ಮುಜರಾಯಿ).

## ಇಂಧನ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಇಎನ್ 255 ಎನ್‌ಸಿಇ 2005, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2005**

ಸರ್ಕಾರಿ ಆದೇಶ ಸಂಖ್ಯೆ: ಇಎನ್ 255 ಎನ್‌ಸಿಇ 2005, ದಿನಾಂಕ: 22.9.2005 ರಲ್ಲಿ "ಮೆ: ಭದ್ರಗಿರಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ತರಿಕೆರೆ ತಾಲ್ಲೂಕಿನ ಸಿಡ್ಲಿಪುರ ಗ್ರಾಮದ ಬಳಿ ಗೋಂಧಿ ಅಣೆಕಟ್ಟಿನ ಎಡದಂಡೆ ಕಾಲುವೆ" ಎಂಬುದರ ಬದಲಾಗಿ "ಮೆ: ಭದ್ರಗಿರಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನ ಕಸಬ ಹೋಬಳಿ ಚಿಕ್ಕಗೊಪ್ಪನ ಹಳ್ಳಿ (ಗೋಂಧಿ) ಗ್ರಾಮದ ಬಳಿ ಗೋಂಧಿ ಅಣೆಕಟ್ಟಿನ ಎಡದಂಡೆ" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1753

**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಪತ್ರಾಗಾರ ಅಭಿವೃದ್ಧಿಗಾಗಿ 2001-2002ನೇ ಸಾಲಿನ ಕೇಂದ್ರದ ಸಹಾಯದ ಸಹಾಯಾನುದಾನ ಯೋಜನೆಯಡಿ ಮೈಸೂರು ವಿಭಾಗೀಯ ಪತ್ರಾಗಾರ ಕಛೇರಿಯ ಕಟ್ಟಡ ನಿರ್ಮಿಸಲು ಸಹಾಯಾನುದಾನ ಮೂರನೇ ಕಂತು ರೂ.4.00 ಲಕ್ಷಗಳು ಬಿಡುಗಡೆ ಕುರಿತು.

**ಓದಲಾಗಿದೆ:** 1) ಕೇಂದ್ರ ಸರ್ಕಾರ ಪತ್ರ ಸಂಖ್ಯೆ: ಎಫ್.ನಂ.31-2(12)01 ಗ್ರಾಂಟ್ಸ್ ದಿನಾಂಕ: 19.7.2005 ಮತ್ತು 27.7.2005.

2) ಆರ್ಥಿಕ ಇಲಾಖೆಗೆ ಜಮಾವಾಗಿರುವ ಕ್ರೆಡಿಟ್ ಕನ್‌ಫರ್ಮೇಷನ್ ಸ್ಲಿಪ್ ಸಂಖ್ಯೆ: ಎಫ್.ಡಿ. 2046 ಎಫ್.ಆರ್.ಸಿ. 2005, ದಿನಾಂಕ: 23.9.2005.

3) ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯದ ಪತ್ರ ಸಂಖ್ಯೆ: ಎ.ಆರ್.ಎಸ್. 35 ಎನ್.ಎ.ಐ. 2001 (ಭಾಗ-2), ದಿನಾಂಕ: 28.9.2005.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಪತ್ರಗಾರ ನಿರ್ದೇಶನಾಲಯದ ಮೈಸೂರು ವಿಭಾಗೀಯ ಪತ್ರಗಾರ ಕಛೇರಿಗೆ ಸ್ವಂತ ಕಟ್ಟಡ ನಿರ್ಮಿಸುವ ಸಲುವಾಗಿ ಕೇಂದ್ರ ಹಾಗೂ ರಾಜ್ಯ ಸರ್ಕಾರದ ಒಟ್ಟು ವೆಚ್ಚ ರೂ.16.50 ಲಕ್ಷ ಪೈಕಿ ಕೇಂದ್ರ ಸರ್ಕಾರ ಶೇ.75 ರಷ್ಟು, ಅನುದಾನದ ಮೂರನೇ ಕಂತಾಗಿ ರೂ.4.00 ಲಕ್ಷಗಳನ್ನು (ನಾಲ್ಕು ಲಕ್ಷಗಳು ಮಾತ್ರ) ಮೇಲೆ ಒಂದರಲ್ಲಿ ಓದಲಾದ ಕೇಂದ್ರ ಸರ್ಕಾರದ ಪತ್ರದಲ್ಲಿ ಮಂಜೂರು ಮಾಡಲಾಗಿರುತ್ತದೆ. ಹಾಗೂ ಈ ಅನುದಾನವು ಮೇಲೆ ಓದಲಾದ ಕ್ರಮ ಸಂಖ್ಯೆ: 2ರ ಕ್ರೆಡಿಟ್ ಕನ್‌ಫರ್ಮೇಷನ್ ಸ್ಲಿಪ್ ದಿನಾಂಕ: 23.9.2005 ರನ್ವಯ ಆರ್ಥಿಕ ಇಲಾಖೆಗೆ ಜಮಾವಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ 3ರ ಕ್ರಮಾಂಕ ರಾಜ್ಯ ಪತ್ರಾಗಾರ ನಿರ್ದೇಶಕರು ಕೇಂದ್ರ ಸರ್ಕಾರ ಮೂರನೇ ಕಂತು ರೂ.4.00 ಲಕ್ಷಗಳನ್ನು (ನಾಲ್ಕು ಲಕ್ಷಗಳು ಮಾತ್ರ) ಲೆಕ್ಕ ಶೀರ್ಷಿಕೆ: 2205-00-104-0-01 ರಾಜ್ಯ ಪತ್ರಾಗಾರ ಘಟಕ - 059 ಇತರೆ ಖರ್ಚುಗಳು (ಯೋಜನೆ) ಯಡಿಯಲ್ಲಿ ಬಿಡುಗಡೆ ಮಾಡಲು ಕೋರಿರುತ್ತಾರೆ. ಅಲ್ಲದೆ ಸದರಿ ಮಂಜೂರು ಮಾಡಿದ ಮೂರನೇ ಕಂತಿನ ಮೊತ್ತಕ್ಕೆ ರಾಜ್ಯದ ಭಾಗ ಶೇ.25 ರಷ್ಟು ರೂ.1.00 (ಒಂದು ಲಕ್ಷ ಮಾತ್ರ) ಗಳನ್ನು ತಮ್ಮ ಇಲಾಖೆಗೆ ಒದಗಿಸಿರುವ ಆಯವ್ಯಯದ ಲೆಕ್ಕ ಶೀರ್ಷಿಕೆ: 2205-00-104-0-01 ರಾಜ್ಯ ಪತ್ರಾಗಾರ ಘಟಕ-051 ಸಾಮಾನ್ಯ ವೆಚ್ಚಗಳು (ಯೋಜನೇತರ) 2005-06ನೇ ಸಾಲಿನ ಆಯವ್ಯಯದ ಅಡಿಯಲ್ಲಿ ಬಿಡುಗಡೆ ಮಾಡಿ ಸರ್ಕಾರದ ಆದೇಶವನ್ನು ಹೊರಡಿಸಲು ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 33 ರಾಪಸ 2005, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2005**

(1) ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಪತ್ರಾಗಾರಗಳ ಅಭಿವೃದ್ಧಿಗಾಗಿ 2001-02ನೇ ಸಾಲಿನ ಕೇಂದ್ರ ಸರ್ಕಾರದ ಸಹಾಯನುದಾನ ಯೋಜನೆಯಡಿ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯ ವಿಭಾಗೀಯ ಪತ್ರಾಗಾರ ಕಛೇರಿಯ ಮೈಸೂರು ತನ್ನದೇ ಆದ ಸ್ವಂತ ಕಟ್ಟಡವನ್ನು ನಿರ್ಮಿಸಲು ಕೇಂದ್ರ ಸರ್ಕಾರದ ರಾಷ್ಟ್ರೀಯ ಪತ್ರಾಗಾರ, ನವದೆಹಲಿ ಇವರಿಂದ ಮಂಜೂರಾಗಿ ಬಿಡುಗಡೆ ಮಾಡಿರುವ ಮೂರನೇ ಕಂತು ರೂ.4.00 ಲಕ್ಷಗಳು (ನಾಲ್ಕು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲಾಗಿದೆ. ವೆಚ್ಚವನ್ನು ಲೆಕ್ಕ ಶೀರ್ಷಿಕೆ 2205-00-104-0-01 ರಾಜ್ಯ ಪತ್ರಾಗಾರ ಘಟಕ-059 ಇತರೆ ವೆಚ್ಚಗಳು (ಯೋಜನೆ) ಯಡಿಯಲ್ಲಿ ಭರಿಸತಕ್ಕದ್ದು.

(2) ರಾಷ್ಟ್ರೀಯ ಪತ್ರಾಗಾರ ನವದೆಹಲಿ, ಇವರಿಂದ ಮೂರನೇ ಕಂತಾಗಿ ಮಂಜೂರಾಗಿರುವ ಅನುದಾನ ರೂ.4.00 ಲಕ್ಷಗಳಿಗೆ (ನಾಲ್ಕು ಲಕ್ಷಗಳು ಮಾತ್ರ) ಸಂಬಂಧಿಸಿದಂತೆ ರಾಜ್ಯ ಸರ್ಕಾರದ ಪಾಲು ಶೇ.25 ರಷ್ಟು ಅಂದರೆ ರೂ.1,00,000/- ಗಳನ್ನು (ಒಂದು ಲಕ್ಷ ಮಾತ್ರ) ಮಂಜೂರು ಮಾಡಿ ಸರ್ಕಾರ ಬಿಡುಗಡೆ ಮಾಡಿ ಆದೇಶಿಸಿದೆ.

ಸದರಿ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2205-00-104-0-01 ರಾಜ್ಯ ಪತ್ರಾಗಾರ ಘಟಕ - 051 ಸಾಮಾನ್ಯ ವೆಚ್ಚಗಳು (ಯೋಜನೇತರ) 2005-06ನೇ ಸಾಲಿನ ಆಯವ್ಯಯದ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 826 ಐ.ಎಫ್. (ಬಿಎ) 2005 ದಿನಾಂಕ: 17.11.2005 ರಲ್ಲಿ ನೀಡಿದ ಸಹಮತಿಯನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ. 1 ಟಿಎಫ್‌ಪಿ 96 ದಿನಾಂಕ: 10.7.1996 ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಅನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**

ಪಿ.ಆರ್. 1754 ಪೀಠಾಧಿಕಾರಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಕೆ.ರಂಗನಾಥಯ್ಯ,ಇವರಿಗೆ ಶಿರಸ್ತೇದಾರ್ ವೃಂದದಿಂದ ತಹಶೀಲ್ದಾರ್ ಗುಂಪು-ಬಿ ವೃಂದದಲ್ಲಿ ಪದೋನ್ನತಿ ನೀಡುವ ಕುರಿತು.

**ಓದಲಾಗಿದೆ:**
1) ಮಾನ್ಯ ಕೆಎಟಿ ಅರ್ಜಿ ಸಂ:14397/2002,ದಿ:11-11-2003ರ ಆದೇಶ
2) ಶ್ರೀ ಕೆ.ರಂಗನಾಥಯ್ಯ,ತಾಲ್ಲೂಕ್ ಶಿರಸ್ತೆದಾರ್ ಇವರ ಮನವಿ ದಿ:21-11-2003
3) ಮಾನ್ಯಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿನ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ: 171/ 2005,ದಿ:03-06-2005.
4) ಸರ್ಕಾರಿ ವಕೀಲರು,ಕೆಎಟಿ ಯೂನಿಟ್,ಇಂದಿರಾನಗರ ಇವರ ಪತ್ರ ಸಂಖ್ಯೆ:10894/ಎಜಿ/ಕೆಎಟಿ/ 05-06, ದಿ:27-10-2005

**ಪ್ರಸ್ತಾವನೆ:**

ಶ್ರೀ ಕೆ.ರಂಗನಾಥಯ್ಯ ತಾಲ್ಲೂಕ್ ಶಿರಸ್ತೆದಾರರು ಇವರಿಗೆ ಅರ್ಜಿಯಲ್ಲಿ ಪ್ರತಿವಾದಿಯಾಗಿರುವ ಶ್ರೀ ಶ್ರೀರಾಮಯ್ಯ, (4ನೇ ಪ್ರತಿವಾದಿ)ನಿವೃತ್ತ ತಹಶೀಲ್ದಾರ್ ಇವರಿಗೆ ಪದೋನ್ನತಿ ಆದ ದಿನಾಂಕದಿಂದ ಇವರಿಗೂ ಸಹ ಪದೋನ್ನತಿ ನೀಡಲು ಹಾಗೂ ಲಭ್ಯವಾಗುವ ಸವಲತ್ತುಗಳನ್ನು ಆದೇಶ ಮಾಡಿದ ದಿನಾಂಕದಿಂದ ಇವರಿಗೂ ಸಹ ನೀಡಲು ಮಾನ್ಯ ಕೆಎಟಿಯು ಮೇಲೆ ಓದಲಾದ (1)ರ ಆದೇಶದಲ್ಲಿ ಆದೇಶಿಸಿತ್ತು.

ಆದರೆ ಶ್ರೀ ಶ್ರೀರಾಮಯ್ಯ ಇವರು ಈಗಾಗಲೇ ನಿವೃತ್ತಿಯಾಗಿದ್ದು, ನಿವೃತ್ತಿ ಸಮಯದಲ್ಲಿ ಇವರು ಗುಂಪು-ಬಿ ತಹಸೀಲ್ದಾರರಾಗಿದ್ದರು. ಶ್ರೀ ಶ್ರೀರಾಮಯ್ಯ ಇವರು ಕಂದಾಯ ಇಲಾಖೆಯಲ್ಲಿ ರಾಜ್ಯ ಮಟ್ಟದ ಶಿರಸ್ತೆದಾರ್/ಉಪ ತಹಶೀಲ್ದಾರ್ ವೃಂದದ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿ ತಹಶೀಲ್ದಾರ್ ಗುಂಪು-ಬಿ ವೃಂದದ ಮುಂಬಡ್ತಿಗಳನ್ನು ರಿವ್ಯೂ ಮಾಡಿ ಜೇಷ್ಠತೆಯಿಲ್ಲದೇ ತಹಶೀಲ್ದಾರ್ ಗುಂಪು ಬಿ ವೃಂದಕ್ಕೆ ಮುಂಬಡ್ತಿ ಹೊಂದಿರುವವರನ್ನೂ ಹಿಂಬಡ್ತಿಗೊಳಿಸಲು ಕ್ರಮ ತೆಗೆದುಕೊಳ್ಳುವಷ್ಟರಲ್ಲಿ ಜೇಷ್ಠತೆಯಲ್ಲಿ ಶ್ರೀ ಕೆ. ರಂಗನಾಥಯ್ಯ, ಇವರಿಗಿಂತ ಕಿರಿಯರಾದ ಇನ್ನಿತರರೊಡನೆ ಶ್ರೀ ಶ್ರೀರಾಮಯ್ಯರವರೂ ಯಥಾ ಸ್ಥಿತಿಯನ್ನು

ಕಾಯ್ದುಕೊಂಡು ಹೋಗುವಂತೆ ಮಾನ್ಯ ಕೆಎಟಿಯಿಂದ ಮಧ್ಯಂತರ ಆದೇಶ ತಂದು ತಾವು ಕೆಲಸ ಮಾಡುತ್ತಿದ್ದ ಹುದ್ದೆಯಲ್ಲಿಯೇ ಮುಂದುವರೆದಿದ್ದರು. ಈ ಅಂಶವನ್ನೇ ಆಧಾರವಾಗಿಟ್ಟುಕೊಂಡು ಶ್ರೀ ಕೆ. ರಂಗನಾಥಯ್ಯ, ಶಿರಸ್ತೇದಾರ್ ಇವರಿಗೆ ಸಂ:ಕಂಇ:10: ಎಎಸ್‌ಡಿ:2001 ದಿ:11-03-2002ರಲ್ಲಿ ಹಿಂಬರಹ ನೀಡಲಾಗಿತ್ತು. ಶ್ರೀ ಶ್ರೀರಾಮಯ್ಯ,ನಿವೃತ್ತ ತಹಶೀಲ್ದಾರ್, ಇವರು ಮಾನ್ಯ ಕೆಎಟಿಯಲ್ಲಿ ದಾಖಲಿಸಿದ್ದ ಅರ್ಜಿ ಸಂ:2901/2001 ಇದುವರೆವಿಗೂ ಇತ್ಯರ್ಥವಾಗಿರುವುದಿಲ್ಲ. ಶ್ರೀ ಕೆ.ರಂಗನಾಥಯ್ಯ, ಶಿರಸ್ತೇದಾರ್ ಇವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ದಾಖಲಿಸಿದ್ದ ನ್ಯಾಯಾಲಯ ನಿಂದನಾ ಅರ್ಜಿ ಸಂ:171/2005ಕ್ಕೆ ಈ ಅಂಶವನ್ನು ಹಾಗೂ ಶಿರಸ್ತೇದಾರರು/ಉಪ ತಹಶೀಲ್ದಾರ್ ಇವರ ಜೇಷ್ಠತಾ ಪಟ್ಟಿಯನ್ನು ಮಾನ್ಯ ಕೆಎಟಿಯ ಆದೇಶದಂತೆ ತಾತ್ಕಾಲಿಕ ಎಂದು ಪರಿಗಣಿಸಲು ಸೂಚಿಸಿರುವ ಅಂಶವನ್ನು ವಿವರಿಸಿ ಅಫಿಡವಿಟನ್ನು ದಿ:08-07-2005ರಂದು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಲಾಗಿತ್ತು.

ಮೇಲೆ ಓದಲಾದ (2)ರಲ್ಲಿ ಶ್ರೀ ಕೆ.ರಂಗನಾಥಯ್ಯ ತಾಲ್ಲೂಕ ಶಿರಸ್ತೆದಾರರು ಸರ್ಕಾರಕ್ಕೆ ಮನವಿ ಸಲ್ಲಿಸಿ ಮಾನ್ಯ ಕೆಎಟಿಯ ಆದೇಶದಂತೆ ಪ್ರತಿವಾದಿಯಾಗಿದ್ದ ಶ್ರೀ ಶ್ರೀರಾಮಯ್ಯ ಇವರಿಗೆ ತಹಶೀಲ್ದಾರ್ ಗುಂಪು ಬಿ ಹುದ್ದೆಗೆ ದಿ:20-11-1995ರಿಂದ ಬಡ್ತಿ ನೀಡಿದ ದಿನಾಂಕದಿಂದಲೇ ತಮಗೂ ತಹಶೀಲ್ದಾರ್ ಗುಂಪು ಬಿ ಹುದ್ದೆಗೆ ಬಡ್ತಿ ನೀಡಿ ಇದರಿಂದ ಲಭ್ಯವಾಗುವ ಎಲ್ಲಾ ಸೇವಾ ಸೌಲಭ್ಯಗಳನ್ನು ಮಂಜೂರು ಮಾಡಲು ವಿನಂತಿಸಿದ್ದರು.

ಶಿರಸ್ತೆದಾರ್/ಉಪ ತಹಶೀಲ್ದಾರ್ ಇವರ ಜೇಷ್ಠತಾ ಪಟ್ಟಿ ಅಧಿಸೂಚನೆ ಸಂ ಆರ್‌ಡಿ:199;ಬಿಎಂಎಂ:2000 ದಿನಾಂಕ: 11-05-2000ರ ಪ್ರಕಾರ ಶ್ರೀ ಕೆ.ರಂಗನಾಥಯ್ಯ ಶಿರಸ್ತೆದಾರ್ ಇವರ ಜೇಷ್ಠತಾ ಕ್ರ.ಸಂ:4667,4ನೇ ಪ್ರತಿವಾದಿ ಶ್ರೀ ಶ್ರೀರಾಮಯ್ಯ ಇವರ ಜೇಷ್ಠತಾ ಕ್ರ.ಸಂ:4668,5ನೇ ಎದುರುದಾರರಾದ ಶ್ರೀ ಕೆ.ದಾಸಪ್ಪ ಇವರ ಜೇಷ್ಠತಾ ಕ್ರ.ಸಂ:4775 ಮತ್ತು 6ನೇ ಎದುರುದಾರರಾದ ಶ್ರೀಮತಿ ದೇವಕಿ ಇವರ ಜೇಷ್ಠತಾ ಕ್ರಮ ಸಂಖ್ಯೆ:5062 ಇರುತ್ತದೆ. ಈಗಾಗಲೇ 4ನೇ ಎದುರುದಾರರು ಗುಂಪು-ಬಿ ತಹಶೀಲ್ದಾರರಾಗಿ ನಿವೃತ್ತಿ ಹೊಂದಿರುತ್ತಾರೆ. 5ನೇ ಎದುರುದಾರರು ಶ್ರೀ ಕೆ.ದಾಸಪ್ಪ ಇವರು ಉಪ ವಿಭಾಗಾಧಿಕಾರಿಯಾಗಿದ್ದಾರೆ. 6ನೇ ಎದುರುದಾರರಾದ ಶ್ರೀಮತಿ ದೇವಕಿ ಇವರು ಉಪ ವಿಭಾಗಾಧಿಕಾರಿಯಾಗಿ ನಿವೃತ್ತಿ ಹೊಂದಿರುತ್ತಾರೆ.

ಮೇಲೆ ಓದಲಾದ (4)ರಲ್ಲಿನ ಸರ್ಕಾರಿ ವಕೀಲರ ಪತ್ರದಲ್ಲಿ ಮಾನ್ಯ ಕೆಎಟಿಯ ದಿನಾಂಕ: 21-10-2005ರ ಆರ್ಡರ್ ಶೀಟ್‌ನ್ನು ಕಳುಹಿಸಿಕೊಡುತ್ತಾ ನ್ಯಾಯಾಲಯ ನಿಂದನಾ ಪ್ರಕರಣ ಸಂಖ್ಯೆ:171/2005 ದಿನಾಂಕ:23-12-2005ರಂದು ಅಂತಿಮವಾಗಿ ವಿಚಾರಣೆಗೆ ಬರುತ್ತಿದ್ದು ಇಷ್ಟರೊಳಗೆ ಮಾನ್ಯ ಕೆಎಟಿಗೆ ಅನುಪಾಲನಾ ವರದಿಯನ್ನು ಸಲ್ಲಿಸಲು ಸೂಚಿಸಲಾಗಿದೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯಾಮಂಡಳಿಯಲ್ಲಿನ ಅರ್ಜಿ ಸಂಖ್ಯೆ:14397/2002, ದಿ:11-11-2003ರ ಆದೇಶವನ್ನು ಪಾಲಿಸಲು ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ:171/2005ರಲ್ಲಿ ಸೂಚಿಸಿರುವುದರಿಂದ ಶ್ರೀ ಕೆ. ರಂಗನಾಥಯ್ಯ, ಶಿರಸ್ತೆದಾರರು, ಪ್ರಾದೇಶಿಕ ಆಯುಕ್ತರ ಕಛೇರಿ,ಬೆಂಗಳೂರು, ಇವರಿಗೆ ಶ್ರೀ ಶ್ರೀರಾಮಯ್ಯ ಇವರಿಗೆ ಬಡ್ತಿ ನೀಡಿದ ದಿ:20-11-95 ರಿಂದ ತಹಶೀಲ್ದಾರ್ ಗುಂಪು-ಬಿ ಹುದ್ದೆಗೆ ಬಡ್ತಿ ನೀಡಿ ಆದೇಶಿಸಬೇಕಾಗಿರುತ್ತದೆ. ಅದಕ್ಕಾಗಿ ಈ ಆದೇಶ.

**ಸರ್ಕಾರಿ ಅದೇಶ ಸಂಖ್ಯೆ:ಕಂಇ:150:ಎಎಸ್‌ಡಿ:05,ಬೆಂಗಳೂರು,ದಿನಾಂಕ: 17ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀಕೆ.ರಂಗನಾಥಯ್ಯ, ಶಿರಸ್ತೆದಾರರು,ಪ್ರಾದೇಶಿಕ ಆಯುಕ್ತರ ಕಛೇರಿ,ಬೆಂಗಳೂರು ಇವರಿಗೆ ಈ ಕೆಳಕಂಡ ನಿಬಂಧನೆಗೊಳಪಟ್ಟು ತಹಸೀಲ್ದಾರ್ ಗುಂಪು-ಬಿ ಹುದ್ದೆಗೆ ಶ್ರೀ ಶ್ರೀರಾಮಯ್ಯ ಇವರಿಗೆ ಪದೋನ್ನತಿ ನೀಡಿದ ದಿ:20-11-95 ರಿಂದ ಬಡ್ತಿ ನೀಡಿ ಆದೇಶಿಸಲಾಗಿದೆ.

(1) ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿ ಅರ್ಜಿ ಸಂಖ್ಯೆ:683/2004, ದಿನಾಂಕ:24-6-2005 ರಲ್ಲಿನ ಆದೇಶದಲ್ಲಿ ಶಿರಸ್ತೇದಾರ್/ಉಪ ತಹಸೀಲ್ದಾರರ ಅಂತಿಮ ಜೇಷ್ಟತಾ ಪಟ್ಟಿಯ ಅಧಿಸೂಚನೆ ಸಂ:ಆರ್‌ಡಿ 467 ಬಿಎಂಎಂ 2000 (ಭಾ), ದಿನಾಂಕ:20-12-2003ರನ್ನು ತಾತ್ಕಾಲಿಕವಾಗಿ ಪರಿಗಣಿಸುವಂತೆ ಆದೇಶಿಸಿರುವುದರಿಂದ, ಸದರಿ ಜೇಷ್ಠತಾ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ: ಆರ್‌ಡಿ 496 ಬಿಎಂಎಂ 2005, ದಿ:17-10-2005ರಲ್ಲಿ ತಾತ್ಕಾಲಿಕ ಎಂದು ಪ್ರಕಟಿಸಲಾಗಿದೆ. ಈ ಜೇಷ್ಟತಾ ಪಟ್ಟಿಯನ್ನು ಅಂತಿಮಗೊಳಿಸಿ ಹೊರಡಿಸುವ ಆದೇಶಕ್ಕೆ ಒಳಪಟ್ಟಿದೆ.

(2) ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಹಾಗೂ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಶಿರಸ್ತೆದಾರರು/ಉಪ ತಹಶೀಲ್ದಾರರು/ಇವರುಗಳು ತಹಶೀಲ್ದಾರರು ಗುಂಪು-ಬಿ ಹುದ್ದೆಗೆ ಪದೋನ್ನತಿ ನೀಡುವಂತೆ ಕೋರಿ ದಾಖಲಿಸಿರುವ ರಿಟ್ ಅರ್ಜಿಗಳಲ್ಲಿ ಮಾನ್ಯ ನ್ಯಾಯಾಲಯಗಳು ನೀಡುವ ಆದೇಶಗಳಿಗೆ ಒಳಪಟ್ಟಿರುತ್ತದೆ.

(3) ಶ್ರೀ ಶ್ರೀರಾಮಯ್ಯ ಇವರು ಮಾನ್ಯ ಕೆಎಟಿಯಲ್ಲಿ ದಾಖಲಿಸಿರುವ ಅರ್ಜಿ ಸಂಖ್ಯೆ:2901/2001ರಲ್ಲಿ ಮಾನ್ಯ ನ್ಯಾಯಮಂಡಳಿ ನೀಡುವ ಆದೇಶಕ್ಕೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ**

ಪಿ.ಆರ್. 36

ಸರ್ಕಾರದ ಅಧೀನ ಕಾರ್ಯದರ್ಶಿ,(ಪ್ರಭಾರ)

ಕಂದಾಯ ಇಲಾಖೆ(ಸೇವೆಗಳು-3).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಂ.ಕೃಷ್ಣ, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂಖ್ಯೆ:ಸಿಆಸುಇ 75 ಎಸ್‌ಇಎನ್ 05 ದಿನಾಂಕ: 24.05.2005.

**ಪ್ರಸ್ತಾವನೆ:**

ಶ್ರೀ ಎಂ.ಕೃಷ್ಣ, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರು ಸಮೂಹ ವ್ಯವಸ್ಥಾಪಕರು, ಕೃಷ್ಣ ಮೇಲ್ದಂಡೆ ಯೋಜನೆ, ಭೀಮರಾಯನ ಗುಡಿ ಹುದ್ದೆಗೆ ನೇಮಿಸಲಾಗಿದ್ದು, ಸದರಿ ಹುದ್ದೆಗೆ ಹಾಜರಾಗದೆ ಅನಧಿಕೃತವಾಗಿ ಗೈರು ಹಾಜರಾಗಿ ದುರ್ನಡತೆ

ಎಸಗಿರುವ ಆರೋಪಕ್ಕಾಗಿ ಅವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ:24.05.2005ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಸದರಿ ಅಧಿಕಾರಿಯವರು ಉತ್ತರಿಸಿರುವುದಿಲ್ಲ. ಆದ್ದರಿಂದ ಅವರ ಮೇಲೆ ಹೊರಿಸಲಾದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 75 ಎಸ್‌ಇಎನ್ 05, ಬೆಂಗಳೂರು, ದಿನಾಂಕ: 12ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ.ಕೃಷ್ಣ, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರ ಮೇಲೆ ಹೊರಿಸಲಾದ ಆರೋಪಗಳ ಕುರಿತಂತೆ ವಿಚಾರಣೆ ಮಾಡಲು ಶ್ರೀ ಪಿ.ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 16 ಸೇಇವಿ 05 ದಿನಾಂಕ:23.08.2005 ರಂತೆ ರೂ.6000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ದಿನಾಂಕ: 4.3.2002 ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2) ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಬೆಂಗಳೂರು ಜಿಲ್ಲಾಧಿಕಾರಿಗಳು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1749

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಎಂ.ರಾಜಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್, ಜಲ ಮತ್ತು ನೆಲ ನಿರ್ವಹಣಾ ಸಂಸ್ಥೆ, ಧಾರವಾಡ ಇವರ ವಿರುದ್ಧ ಇಲಾಖಾ ವಿಚಾರಣೆ-ಮಂಡನಾಧಿಕಾರಿಗಳನ್ನು ಬದಲಾಯಿಸಿ ಹೊಸ ಮಂಡನಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 68 ಎಸ್‌ಇಎನ್ 96 ದಿನಾಂಕ:10.04.2000.

2) ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 68 ಎಸ್‌ಇಎನ್ 96 ದಿನಾಂಕ:02.08.2004.

3) ಶ್ರೀ ಬಿ.ರಂಗಸ್ವಾಮಿ, ನಿವೃತ್ತ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳ ಪತ್ರ ದಿನಾಂಕ: 22.06.2005, 16.08.2005 ಮತ್ತು 29.09.2005.

**ಪ್ರಸ್ತಾವನೆ:**

ಮೇಲೆ(1)ರಲ್ಲಿ ಓದಲಾದ ದಿನಾಂಕ:10.04.2000ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ರಾಜಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್ ವಿರುದ್ಧ ಇಲಾಖಾ ವಿಚಾರಣೆಯಲ್ಲಿ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು, ಸರ್ಕಾರವು ಅಧೀನ ಕಾರ್ಯದರ್ಶಿ (ತಾಂತ್ರಿಕ-1) ನೀರಾವರಿ ಇಲಾಖೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು ಹಾಗೂ ಮೇಲೆ(2)ರಲ್ಲಿ ಓದಲಾದ ದಿನಾಂಕ:02.08.2004ರ ಸರ್ಕಾರಿ ಆದೇಶದಲ್ಲಿಯೂ ಇವರನ್ನು ಮಂಡನಾಧಿಕಾರಿಯಾಗಿ ಮುಂದುವರಿಸಲಾಗಿತ್ತು. ಆದರೆ, ಮೇಲೆ(3)ರಲ್ಲಿ ಓದಲಾದ ವಿಚಾರಣಾಧಿಕಾರಿಯವರ ದಿನಾಂಕ: 22.06.2005, 16.08.2005 ಮತ್ತು 29.09.2005ರ ಪತ್ರಗಳಲ್ಲಿ ಮಂಡನಾಧಿಕಾರಿಗಳು ಪ್ರಸ್ತುತ ವಿಚಾರಣೆಯಲ್ಲಿ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಹಾಗೂ ಸ್ವತ: ವಿಚಾರಣೆಯಲ್ಲಿ ಹಾಜರಾಗದೆ, ಸಹಕಾರ ನೀಡುತ್ತಿಲ್ಲವೆಂದು ವರದಿ ಮಾಡಿರುವ ಹಿನ್ನೆಲೆಯಲ್ಲಿ ಸರ್ಕಾರವು ಮಂಡನಾಧಿಕಾರಿಯನ್ನು ಬದಲಾಯಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 68 ಎಸ್‌ಇಎನ್ 96 ಬೆಂಗಳೂರು , ದಿನಾಂಕ: 13ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಸ್ತುತ ಪ್ರಕರಣದಲ್ಲಿ ಮಂಡನಾಧಿಕಾರಿಯಾದ ಅಧೀನ ಕಾರ್ಯದರ್ಶಿ (ತಾಂತ್ರಿಕ-1), ನೀರಾವರಿ ಇಲಾಖೆ ಇವರ ಬದಲಾಗಿ ಸರ್ಕಾರದ ಸಹ ಕಾರ್ಯದರ್ಶಿ/ಉಪ ಕಾರ್ಯದರ್ಶಿ (ಸೇವೆಗಳು), ಜಲಸಂಪನ್ಮೂಲ ಇಲಾಖೆ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1750

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಟಿ.ಮಲ್ಲಪ್ಪ, ಕೆಎಎಸ್ ಅಧಿಕಾರಿ,ಶ್ರೀ ಸಿ.ಎನ್.ಕುಪ್ಪುಸ್ವಾಮಿ, ಉಪ ಮುಖ್ಯ ಇಂಜಿನಿಯರ್, ಶ್ರೀ ಬಿ.ಎಸ್.ಮುರಳಿ, ಸಹಾಯಕ ಕಾರ್ಯಪಾಲಕ ಅಭಿಯಂತರರು, ಶ್ರೀ ಪರಸಪ್ಪ ಮಹೇಂದ್ರಕರ್, ನಿವೃತ್ತ ಕಿರಿಯ ಅಭಿಯಂತರರು ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1) ನೋಟೀಸ್ ಸಂಖ್ಯೆ:ಸಿಆಸುಇ 64 ಎಸ್ಇಎನ್ 04 ದಿನಾಂಕ:24.01.2005.
2) ಶ್ರೀ ಟಿ.ಮಲ್ಲಪ್ಪ, ಕೆಎಎಸ್ ಅಧಿಕಾರಿ ಅವರ ದಿನಾಂಕ:25.02.2005ರ ಉತ್ತರ.
3) ಶ್ರೀ ಸಿ.ಎನ್.ಕುಪ್ಪುಸ್ವಾಮಿ, ಉಪ ಮುಖ್ಯ ಇಂಜಿನಿಯರ್ ಅವರ ದಿನಾಂಕ:15.03.2005ರ ಉತ್ತರ.
4) ಶ್ರೀ ಬಿ.ಎಸ್.ಮುರಳಿ, ಸಹಾಯಕ ಕಾರ್ಯಪಾಲಕ ಅಭಿಯಂತರರು ಅವರ ದಿನಾಂಕ:26.02.2005ರ ಉತ್ತರ.
5) ಶ್ರೀ ಪರಸಪ್ಪ ಮಹೇಂದ್ರಕರ್, ನಿವೃತ್ತ ಕಿರಿಯ ಅಭಿಯಂತರರು ಅವರ ದಿನಾಂಕ:23.03.2005ರ ಉತ್ತರ.

**ಪ್ರಸ್ತಾವನೆ:**

ಹಾಸನ ಜಿಲ್ಲೆ ಹೇಮಾವತಿ ಜಲಾಶಯ ಯೋಜನೆ-2ರಲ್ಲಿ ಶ್ರೀ ಟಿ.ಮಲ್ಲಪ್ಪ, ಕೆಎಎಸ್ ಅಧಿಕಾರಿ ಅವರು ವಿಶೇಷ ಭೂಸ್ವಾಧೀನಾಧಿಕಾರಿ ಹುದ್ದೆಯಲ್ಲಿ, ಶ್ರೀ ಸಿ.ಎನ್.ಕುಪ್ಪುಸ್ವಾಮಿ ಅವರು ಉಪ ಮುಖ್ಯ ಇಂಜಿನಿಯರ್ ಅವರು ಕಾರ್ಯಪಾಲಕ ಅಭಿಯಂತರರ ಹುದ್ದೆಯಲ್ಲಿ, ಶ್ರೀ ಬಿ.ಎಸ್.ಮುರಳಿ ಅವರು ಸಹಾಯಕ ಕಾರ್ಯಪಾಲಕ ಅಭಿಯಂತರರ ಹುದ್ದೆಯಲ್ಲಿ ಹಾಗೂ ಶ್ರೀ ಪರಸಪ್ಪ ಮಹೇಂದ್ರಕರ್ ಅವರು ಕಿರಿಯ ಅಭಿಯಂತರರ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕು, ಹಳೆಕೋಟೆ ಹೋಬಳಿ, ಚಿಕ್ಕನಹಳ್ಳಿ ಗ್ರಾಮದ ಅವಾರ್ಡ್ ರಚಿಸುವಲ್ಲಿ ಅಕ್ರಮ ನಡೆದಿರುವ ಆರೋಪದ ಸಂಬಂಧ ಮೇಲ್ಕಂಡ ಅಧಿಕಾರಿ/ನೌಕರರುಗಳಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ:24.01.2005ರ ನೋಟೀಸನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1957ರ ನಿಯಮ 11ರನ್ವಯ 13ರೊಡನೆ ಓದಿಕೊಂಡಂತೆ ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಶ್ರೀ ಟಿ.ಮಲ್ಲಪ್ಪ ಅವರು ದಿನಾಂಕ: 25.02.2005 ರಂದು, ಶ್ರೀ ಸಿ.ಎನ್.ಕುಪ್ಪುಸ್ವಾಮಿ ಅವರು ದಿನಾಂಕ:15.03.2005ರಂದು, ಶ್ರೀ ಬಿ.ಎಸ್.ಮುರಳಿ ಅವರು ದಿನಾಂಕ: 26.02.2005 ಹಾಗೂ ಶ್ರೀ ಪರಸಪ್ಪ ಮಹೇಂದ್ರಕರ್ ಅವರು ದಿನಾಂಕ:23.03.2005ರಂದು ನೋಟೀಸಿಗೆ ಉತ್ತರ ಸಲ್ಲಿಸಿದ ಅವರುಗಳು ತಮ್ಮಗಳ ಮೇಲೆ ಹೊರಿಸಲಾದ ದೋಷಾರೋಪಣೆಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಅವರುಗಳ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 64 ಎಸ್ಇಎನ್ 2004 ಬೆಂಗಳೂರು ದಿನಾಂಕ: 8ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ ನಿಯಮ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಟಿ.ಮಲ್ಲಪ್ಪ, ಕೆಎಎಸ್ ಅಧಿಕಾರಿ, ಶ್ರೀ ಸಿ.ಎನ್.ಕುಪ್ಪುಸ್ವಾಮಿ, ಉಪ ಮುಖ್ಯ ಇಂಜಿನಿಯರ್, ಶ್ರೀ ಬಿ.ಎಸ್.ಮುರಳಿ, ಸಹಾಯಕ ಕಾರ್ಯಪಾಲಕ ಅಭಿಯಂತರರು, ಶ್ರೀ ಪರಸಪ್ಪ ಮಹೇಂದ್ರಕರ್, ನಿವೃತ್ತ ಕಿರಿಯ ಅಭಿಯಂತರರು ಅವರುಗಳ ಮೇಲೆ ಹೊರಿಸಲಾದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಶ್ರೀ ಸೈಯದ್ ನಿಸಾರ್ ಅಹಮದ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 16 ಸೇಇವಿ 2005 ದಿನಾಂಕ:23.08.2005ರಂತೆ ರೂ.6000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ದಿನಾಂಕ:04.03.2002ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಉಪ ಮುಖ್ಯ ಇಂಜಿನಿಯರ್, ಮುಖ್ಯ ಇಂಜಿನಿಯರ್‌ರವರ ಕಛೇರಿ, ಹೇಮಾವತಿ ಜಲಾಶಯ ಯೋಜನೆ, ಗೊರೂರು, ಹಾಸನ ಜಿಲ್ಲೆ ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಮುಖ್ಯ ಇಂಜಿನಿಯರ್, WRDO, ಆನಂದರಾವ್ ವೃತ್ತ, ಬೆಂಗಳೂರು ಇವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1751

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 17 ಎಸ್ಇಎನ್ 2002 ದಿನಾಂಕ:19.05.2004.
2) ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವರದಿ ದಿನಾಂಕ: 24.11.2005.

**ಪ್ರಸ್ತಾವನೆ:**

ಶ್ರೀಮತಿ ಸಿ.ಸರೋಜ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರು ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿಯಲ್ಲಿ ಕಾರ್ಯದರ್ಶಿಯಾಗಿ ಪ್ರಭಾರ ವಹಿಸಿದ್ದಾಗ ಮಂಡಳಿಯ ವತಿಯಿಂದ ಕೈಗೊಳ್ಳಲಾದ ಜನಜಾಗೃತಿ ಕಾರ್ಯಕ್ರಮಗಳಿಗೆ ವೆಚ್ಚ ಮಾಡುವಲ್ಲಿ ಕರ್ನಾಟಕ ಆರ್ಥಿಕ ಸಂಹಿತೆಯನ್ನು ಉಲ್ಲಂಘಿಸಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿದ ಆರೋಪಕ್ಕಾಗಿ ಅವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ:19.05.2004ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ:24.11.2005ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಎಸ್ಇಎನ್ 02 ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2005.**

ಸರ್ಕಾರವು ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96, ದಿನಾಂಕ:24-4-1998 ರನ್ವಯ ರೂ.5,000/- (ಐದು ಸಾವಿರ ರೂಪಾಯಿಗಳು ಮಾತ್ರ) ರೂಪಾಯಿಗಳ ಗೌರವ ಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001, ದಿನಾಂಕ:4-3-2002 ರನ್ವಯ ರೂ.1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ ``2052 ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-051 ಸಾಮಾನ್ಯ ವೆಚ್ಚಗಳು'' ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1752

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಬಿ.ಸಿ. ಶಿವರುದ್ರಸ್ವಾಮಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಇವರ ಪ್ರತಿನಿಯೋಜನಾ ಅವಧಿಯನ್ನು ವಿಸ್ತರಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ: ಲಾ 114 ಪಿಪಿಇ 97, ದಿನಾಂಕ: 12.6.1998.
2) ಸರ್ಕಾರಿ ಆದೇಶ ಸಂಖ್ಯೆ: ಲಾ 223 ಪಿಪಿಇ 98, ದಿನಾಂಕ: 2.11.98 ಮತ್ತು 19.1.98.
3) ಸರ್ಕಾರಿ ಆದೇಶ ಸಂಖ್ಯೆ: ಲಾ 162 ಪಿಪಿಇ 2003, ದಿನಾಂಕ: 22.10.2003.
4) ಕಾರ್ಯಕಾರಿ ನಿರ್ದೇಶಕರು (ಕಾನೂನು ಮತ್ತು ಕೈಗಾರಿಕಾ ಸಂಬಂಧಗಳು) ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ (ನಿ), ಬೆಂಗಳೂರು. ಇವರ ಪತ್ರ ಸಂಖ್ಯೆ: ಕೆಪಿಟಿಸಿಎಲ್:1315:1304:2003-04, ದಿನಾಂಕ: 12.5.2004.
5) ಸರ್ಕಾರಿ ಪತ್ರ ಸಂಖ್ಯೆ: ಲಾ 86 ಪಿಪಿಇ 2004, ದಿನಾಂಕ: 15.10.2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 12.6.1998ರ ಸರ್ಕಾರಿ ಆದೇಶದಲ್ಲಿ ಶ್ರೀ ಬಿ.ಸಿ. ಶಿವರುದ್ರಸ್ವಾಮಿ, ಅಂದಿನ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ.) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕೆ.ಆರ್.ನಗರ ಇವರನ್ನು ಬೆಂಗಳೂರು ನಗರ ವಿದ್ಯುಚ್ಛಕ್ತಿ ಮಂಡಳಿಯಲ್ಲಿ ಸಹಾಯಕ ಕಾನೂನು ಅಧಿಕಾರಿಯಾಗಿ ನಿಯೋಜನೆಯ ಮೇಲೆ ನೇಮಿಸಲು ಅವರ ಸೇವೆಯನ್ನು ಇಂಧನ ಇಲಾಖೆಯ ವಶಕ್ಕೆ ನೀಡಲಾಗಿದ್ದು, ಮೇಲೆ (2) ರಲ್ಲಿ ಓದಲಾದ ದಿನಾಂಕ: 2.11.98 ಮತ್ತು 19.1.99ರ ಸರ್ಕಾರಿ ಆದೇಶದ ಅನುಸಾರ ನಿಯೋಜನಾ ಅವಧಿ 5 ವರ್ಷವು ದಿನಾಂಕ: 5.7.2003 ರಂದು ಮುಕ್ತಾಯವಾಗಿರುತ್ತದೆ. ಮೇಲೆ (3) ರಲ್ಲಿ ಓದಲಾದ ದಿನಾಂಕ: 22.10.2003ರ ಸರ್ಕಾರಿ ಆದೇಶದ ಅನುಸಾರದ ವೈದ್ಯಕೀಯ ಕಾರಣಕ್ಕಾಗಿ ಸದರಿ ಅಧಿಕಾರಿಯವರ ನಿಯೋಜನಾ ಅವಧಿಯನ್ನು ದಿನಾಂಕ: 6.7.2003 ರಿಂದ 31.3.2004ರ ವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ. ಸದರಿ ಅಧಿಕಾರಿಯು ಮಾತೃ ಇಲಾಖೆಯಲ್ಲಿ ದಿನಾಂಕ: 1.4.2004 ರಂದು ಕರ್ತವ್ಯಕ್ಕೆ ಹಾಜರಾಗಬೇಕಾಗಿತ್ತು. ಆದರೆ ಮೇಲೆ (4) ರಲ್ಲಿ ಓದಲಾದ ದಿನಾಂಕ: 12.5.2004ರ ಕಾರ್ಯಕಾರಿ ನಿರ್ದೇಶಕರು, ಕಾನೂನು ಮತ್ತು ಕೈಗಾರಿಕಾ ಸಂಬಂಧಗಳು, ಕೆಪಿಟಿಸಿಎಲ್, ಬೆಂಗಳೂರು ಸದರಿ ಸಂಸ್ಥೆಗೆ ಸದರಿ ಅಧಿಕಾರಿಯ ಸೇವೆಯು ಅಗತ್ಯವಾಗಿರುವುದರಿಂದ ಮತ್ತು ಅಧಿಕಾರಿಯ ಆರೋಗ್ಯ ದೃಷ್ಟಿಯಿಂದ ನಿಯೋಜನಾ ಅವಧಿಯನ್ನು ವಿಸ್ತರಿಸುವಂತೆ ಕೋರಿರುತ್ತಾರೆ. ಮೇಲೆ (5) ರಲ್ಲಿ ಓದಲಾಗಿರುವ ದಿನಾಂಕ: 15.10.2004 ಪತ್ರದಲ್ಲಿ ಸದರಿ ಅಧಿಕಾರಿಯ ನಿಯೋಜನಾ ಅವಧಿಯನ್ನು ವಿಸ್ತರಿಸಲು ಸಾಧ್ಯವಿರುವುದಿಲ್ಲವೆಂಬ ನಿರ್ಣಯವನ್ನು ತೆಗೆದುಕೊಂಡು ಸಂಬಂಧಪಟ್ಟವರಿಗೆ ಸೂಚಿಸಲಾಗಿದೆ. ಈ ಆದೇಶವನ್ನು ಅನುಸರಿಸಿ ಸದರಿ ಅಧಿಕಾರಿಗಳು ದಿನಾಂಕ: 1.12.2004ರ ಪೂರ್ವಾಹ್ನ ಮಾತೃ ಇಲಾಖೆಯಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಆದ ಕಾರಣ, ಸದರಿ ಅಧಿಕಾರಿಯ ವಿದೇಶಿ ಸೇವೆಯ ನಿಯೋಜನಾ ಅವಧಿಯನ್ನು ದಿನಾಂಕ: 1.4.2004 ರಿಂದ 30.11.2004ರ ವರೆಗೆ ವಿಸ್ತರಿಸಿ ಆದೇಶವನ್ನು ಹೊರಡಿಸಬೇಕಾಗಿರುತ್ತದೆ. ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 119 ಪಿಪಿಇ 2005, ಬೆಂಗಳೂರು, ದಿನಾಂಕ: 7ನೇ ಡಿಸೆಂಬರ್ 2005**

ಶ್ರೀ ಬಿ.ಸಿ. ಶಿವರುದ್ರಸ್ವಾಮಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಇವರನ್ನು ಬೆಂಗಳೂರಿನ ಕೆಪಿಟಿಸಿಎಲ್ ಇಲ್ಲಿಗೆ ಸಹಾಯಕ ಕಾನೂನು ಅಧಿಕಾರಿಯಾಗಿ ನಿಯೋಜನೆಯ ಮೇಲೆ ನೇಮಿಸಿರುವ ಅವಧಿಯನ್ನು ದಿನಾಂಕ: 1.4.2004 ರಿಂದ 30.11.2004ರ ವರೆಗೆ ಅಂತಿಮವಾಗಿ ವಿಸ್ತರಿಸಿ ಆದೇಶವನ್ನು ಹೊರಡಿಸಲಾಗಿದೆ. ಸದರಿ ವಿಸ್ತರಣೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 419 (ಬಿ) ಅನ್ವಯ ವಿಶೇಷ

ಆದೇಶದ ಮುಖಾಂತರ ಸರ್ಕಾರಿ ಆದೇಶ ಸಂಖ್ಯೆ: ಲಾ 223 ಪಿಪಿಇ 98, ದಿನಾಂಕ: 23.11.1998 ರಲ್ಲಿನ ನಿಬಂಧನೆ ಮತ್ತು ಷರತ್ತುಗಳಿಗೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1755 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ ಮತ್ತು ಸು ಮತ್ತು ಕಾಫಿಪೋಸ ಮತ್ತು ಅಭಿಯೋಗ).

**PERSONNEL AND ADMINISTRATIVE REFORMS SECRETARIAT**

**ADDENDUM No. DPAR 133 SME 2004, Bangalore, Dated: 13th December 2005**

In Government Order No. DPAR 133 SME 2004, dated: 7.8.2004 regarding terms and conditions of deputation of Smt Vandana Gurnani, IAS, the condition No.2 shall be and shall always be substituted and inserted as follows:

**"Pay and Allowances:-** During the period of her deputation with the University of Manitoba the pay and allowances shall be met by the University of Manitoba. She shall not be entitled to any TA/Joining Time/Joining time pay from the State Government until she joins a Government post irrespective of whether she is posted at Bangalore or any other Station"

The other conditions stipulated in the Government Order dated: 7.8.2004 will be remain unaltered.

By Order and in the name of the Governor of Karnataka,

**K. SUDHAKARA SHETTY**

P.R. 1758 Under Secretary to Government

Department of Personnel and Administrative Reforms (Services-1).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆಯ ಎನ್.ಎಸ್.ಎಸ್. ಕೋಶದ ಸಂಪರ್ಕಾಧಿಕಾರಿ ಹುದ್ದೆಯನ್ನು ಪದನಿಮಿತ್ತ ಜಂಟಿ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 263 ಸಆಸೇ 96, ದಿನಾಂಕ: 16.4.1997.

2) ಕಡತ ಸಂಖ್ಯೆ: ವಾಪ್ರಯು 21 ರಾಸೇಯೋ 2001 (ಭಾಗ).

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 16.4.1997ರ ಸರ್ಕಾರದ ಆದೇಶದಲ್ಲಿ ರಾಜ್ಯ ಮಟ್ಟದಲ್ಲಿ ರಾಷ್ಟ್ರೀಯ ಸೇವಾ ಯೋಜನೆಯ ಕಾರ್ಯಗಳನ್ನು ಪರಿಣಾಮಕಾರಿಯಾಗಿ ಸಮನ್ವಯ ಮಾಡಲು ಎನ್.ಎಸ್.ಎಸ್. ಕೋಶವನ್ನು ಸಚಿವಾಲಯದಲ್ಲಿ ಸಿಬ್ಬಂದಿ ವೆಚ್ಚವನ್ನು ಭಾರತ ಸರ್ಕಾರ ಭರಿಸುತ್ತದೆ ಎಂಬ ಆಧಾರದ ಮೇಲೆ ರಾಜ್ಯ ಸರ್ಕಾರ ಯಾವುದೇ ಅನುದಾನವನ್ನು ನೀಡುವುದಿಲ್ಲವೆಂಬ ಷರತ್ತಿಗೊಳಪಟ್ಟು ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಕಡತದಲ್ಲಿ ಎನ್.ಎಸ್.ಎಸ್. ಕೋಶದ ಸಂಪರ್ಕಾಧಿಕಾರಿ ಹುದ್ದೆಯನ್ನು ಕಛೇರಿಯ ಆಡಳಿತ ದೃಷ್ಟಿಯಿಂದ ಸಂಪರ್ಕಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆ ಎಂದು ಪರಿಗಣಿಸಲು ಪ್ರಸ್ತಾಪಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 78 ಸಸಿವಿ 2005, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2005**

ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆಯ ಎನ್.ಎಸ್.ಎಸ್. ಕೋಶದ ಸಂಪರ್ಕಾಧಿಕಾರಿ ಹುದ್ದೆಯನ್ನು ಸಂಪರ್ಕಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 19 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಆರ್ಥಿಕ ಇಲಾಖೆ (ಸಾಂಸ್ಥಿಕ ಹಣಕಾಸು) ವಿಭಾಗದ ಸಂಶೋಧನಾ ಶಾಖೆಯ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 854 ಎಸ್‌ಜಿಬಿ 82, ದಿನಾಂಕ: 13.2.1983 ಮತ್ತು 18.6.1984.

2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 56 ಸಸಿವಿ 99, ದಿನಾಂಕ: 27.1.2000.

3) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 18 ಸಸಿವಿ 2001, ದಿನಾಂಕ: 14.8.2001.

4) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಸಸಿವಿ 2002, ದಿನಾಂಕ: 8.5.2002.

5) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 82 ಸಸಿವಿ 2004, ದಿನಾಂಕ: 4.3.2005.

**ಪ್ರಸ್ತಾವನೆ:**

ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಸಾಂಸ್ಥಿಕ ಹಣಕಾಸು ಮತ್ತು ಸಾಂಖ್ಯಿಕ ಇಲಾಖೆಯ ಸಂಶೋಧನಾ ಇಲಾಖೆಯಲ್ಲಿ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿತ್ತು.

| | | |
|---|---|---|
| 1 | ವಿಶೇಷಾಧಿಕಾರಿ (ಬ್ಯಾಂಕಿಂಗ್) | 1 ಹುದ್ದೆ |
| 2 | ಹಿರಿಯ ಸಾಂಖ್ಯಿಕ ಸಹಾಯಕ | 3 ಹುದ್ದೆಗಳು |
| 3 | ಶೀಘ್ರಲಿಪಿಗಾರರು | 1 ಹುದ್ದೆ |
| 4 | ಬೆರಳಚ್ಚುಗಾರರು | 2 ಹುದ್ದೆಗಳು |
| 5 | ದಲಾಯತ್ | 2 ಹುದ್ದೆಗಳು |

ಮೇಲ್ಕಂಡ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬಂದಿದ್ದು, ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಿರಿಯ ಸಾಂಖ್ಯಿಕ ಸಹಾಯಕ ದರ್ಜೆಯ ಮೂರು ಹುದ್ದೆಗಳನ್ನು ಸಹಾಯಕ ಸಾಂಖ್ಯಿಕ ಅಧಿಕಾರಿ ದರ್ಜೆಗೆ ನಿಮ್ನೀಕರಿಸಿರುವುದರೊಂದಿಗೆ ಎಲ್ಲಾ ಹುದ್ದೆಗಳನ್ನು ಮುಂದುವರೆಸಿಕೊಂಡು ಬರಲಾಗಿದೆ.

ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸಾಂಸ್ಥಿಕ ಹಣಕಾಸು ಇಲಾಖೆಯನ್ನು ಆರ್ಥಿಕ ಇಲಾಖೆಯೊಡನೆ ವಿಲೀನಗೊಳಿಸಲಾಗಿದೆ ತದನಂತರ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಎರಡು ಸಹಾಯಕ ಸಾಂಖ್ಯಿಕ ಅಧಿಕಾರಿ, ಒಂದು ಬೆರಳಚ್ಚುಗಾರರ ಹುದ್ದೆ ಹಾಗೂ ಒಂದು ದಲಾಯತ್ ಹುದ್ದೆಗಳನ್ನು ದಿನಾಂಕ: 31.05.2002ರ ಅವಧಿಗೆ ಮಾತ್ರ ಮುಂದುವರೆಸಿ ದಿನಾಂಕ: 1.6.2002 ರಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ ಹಾಗೂ ಇನ್ನುಳಿದ ಹುದ್ದೆಗಳನ್ನು ಕಾಲ ಕಾಲಕ್ಕೆ ಮುಂದುವರೆಸಿಕೊಂಡು ಬಂದಿದ್ದು ಕೊನೆಯದಾಗಿ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮುಂದುವರಿಸಿದ ಅವಧಿಯು ದಿನಾಂಕ: 31.12.2005 ರಂದು ಮುಕ್ತಾಯಗೊಂಡಿರುತ್ತದೆ.

ಆದ್ದರಿಂದ ಸದರಿ ಹುದ್ದೆಗಳ ಅವಧಿಯನ್ನು ದಿನಾಂಕ: 1.1.2006 ರಿಂದ ಮುಂದುವರಿಸುವ ಕುರಿತು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 74 ಸಸಿವಿ 2005, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2005**

ಆರ್ಥಿಕ ಇಲಾಖೆ (ಸಾಂಸ್ಥಿಕ ಹಣಕಾಸು) ವಿಭಾಗದ ಸಂಶೋಧನಾ ಶಾಖೆಯಲ್ಲಿನ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 1.1.2006 ರಿಂದ ಒಂದು ವರ್ಷದವರೆಗೆ ಮುಂದುವರೆಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ವಿಶೇಷಾಧಿಕಾರಿ (ಬ್ಯಾಂಕಿಂಗ್) | ಒಂದು |
| 2 | ಸಹಾಯಕ ಸಾಂಖ್ಯಿಕ ಅಧಿಕಾರಿ | ಒಂದು |
| 3 | ಶೀಘ್ರಲಿಪಿಗಾರರು | ಒಂದು |
| 4 | ಬೆರಳಚ್ಚುಗಾರರು | ಒಂದು |
| 5 | ದಲಾಯತ್ | ಒಂದು |

ಈ ಆದೇಶವನ್ನು ದಿನಾಂಕ: 10.7.1996ರ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ರಲ್ಲಿ ಹೊರಡಿಸಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 20

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ಮಾರ್ಪಾಡು ಸಂಖ್ಯೆ: ಪಿಡಿ 60 ಎಸ್‌ಎಂಸಿ 2005, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2005**

ಸರ್ಕಾರದ ಆದೇಶ ಸಂಖ್ಯೆ: ಪಿಡಿ 60 ಎಸ್‌ಎಂಸಿ 2005, ದಿನಾಂಕ: 29.08.2005ರ ಭಾಗ-1ರ ಕ್ರಮ ಸಂಖ್ಯೆ 18 ರಲ್ಲಿರುವ ಶ್ರೀ ಬಿ. ಗೋಪಾಲಕೃಷ್ಣಮೂರ್ತಿ, ಸಹಾಯಕ ಸಾಂಖ್ಯಿಕ ಅಧಿಕಾರಿ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 32 ರಡಿ ಸಹಾಯಕ ನಿರ್ದೇಶಕರ ಹುದ್ದೆಗೆ ಬಡ್ತಿ ನೀಡಿ ಈ ಕೆಳಕಂಡ ಕಛೇರಿಗೆ ನೇಮಿಸಲಾಗಿದ್ದ ಆದೇಶವನ್ನು ಮಾರ್ಪಾಡು ಮಾಡಿದೆ.

ಸಾಂಖ್ಯಿಕ ಅಧಿಕಾರಿ,
ಜಿಲ್ಲಾ ಪಂಚಾಯತ್,
ಕೊಪ್ಪಳ.

"ಎಂಬುದಕ್ಕೆ ಬದಲಾಗಿ ಈ ಕೆಳಗಿನಂತೆ ಓದಿಕೊಳ್ಳತಕ್ಕದ್ದು"

ಪ್ರಾದೇಶಿಕ ಯೋಜನಾಧಿಕಾರಿ,
ಜಿಲ್ಲಾ ಪಂಚಾಯತ್,
ಕೊಪ್ಪಳ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2

**ಕೆ. ಭವಾನಿ**

ಪೀಠಾಧಿಕಾರಿ (ಪ್ರಭಾರ), ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.